# ಡೂಡು

ಮತ್ತು

# ಇತರ ಕಥೆಗಳು

ಬರೆದವರು :

**ಆರ್. ಕೆ. ನಾರಾಯಣ್**

ಅನುವಾದಕರು :

**ಎಚ್. ವೈ. ಶಾರದಾಪ್ರಸಾದ್**

ಇಂಡಿಯನ್ ಥಾಟ್ ಪ್ರಕಟಣೆಗಳು

ಲಕ್ಷ್ಮೀಪುರಂ — — — ಮೈಸೂರು

---

# ಡೂಡೂ

---

ಡೂಡುವಿಗೆ ಎಂಟುವರ್ಷ. ಅವನಿಗೆ ಹಣ ಬೇಕಾಗಿತ್ತು. ಅವನಿಗೆ ಇನ್ನೂ ಎಂಟುವರ್ಷವಾದುದರಿಂದ ಯಾರೂ ಅವನ ಆರ್ಥಿಕ ಸಮಸ್ಯೆಗಳನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. (ಅವನಿಗೆ ನೂರಾರು ಕಾರಣಗಳಿಗಾಗಿ ಹಣ ಬೇಕಾಗಿತ್ತು: ಬರುವ ದೀಪಾವಳಿಗೆ ಆನೆ ಪಟಾಕಿ ಕೊಂಡಿಟ್ಟುಕೊಳ್ಳುವುದರಿಂದ ಹಿಡಿದು, ತರಗತಿಯ ಹುಡುಗರೆಲ್ಲರೂ ಕೊಂಡು ಕೊಂಡೇತೀರಬೇಕು, ಇಲ್ಲದಿದ್ದರೆ ಬೆತ್ತದಿಂದ ಬಡಿದುಹಾಕಿಬಿಡುತ್ತೇನೆಂದು ಅವರ ಮೇಷ್ಟರು ಕಡ್ಡಾಯಪಡಿಸುತ್ತಿದ್ದ ಪೆನ್‌ಹೋಲ್ಡರ್ ಕೊಳ್ಳಬೇಕಾದುದರವರೆಗೆ ಅವನಿಗೆ ಅನೇಕಾನೇಕ ತಾಪತ್ರಯಗಳಿದ್ದುವು) ಹಿರಿಯರ ಔದಾರ್ಯದ ಬಗ್ಗೆ ಅವನಿಗೆ ಭ್ರಾಂತಿಯೇನೂ ಇರಲಿಲ್ಲ. ಓಡಾಡುವಾಗಲೆಲ್ಲ ಅವರ ಜೇಬುಗಳಲ್ಲಿ ದುಡ್ಡು ಘಲ್‌ಘಲ್ ಎನ್ನುತ್ತಿರುವುದು. ಆದರೂ ಕೈಯೆತ್ತಿ ಯಾರಿಗೂ ಕೊಡರು. ಅಷ್ಟು ಜಿಪುಣರು. ಬೇರೆಗತಿಯೇ ಇಲ್ಲವೆನ್ನುವವರೆಗೆ ದೊಡ್ಡವರು ದುಡ್ಡಿನಗಂಟು ಬಿಚ್ಚರು.

ಡೂಡುವಿನ ಹತ್ತಿರ ಒಂದು ದೊಡ್ಡ ಜಾಯಿಕಾಯಿಪೆಟ್ಟಿಗೆ ಇತ್ತು. ಅದೇ ಅವನ ಆಫೀಸು. ಅದರ ಮುಚ್ಚಳ ತೆರೆಯಿತೆಂದರೆ ಅವನ ಆಫೀಸು ತೆರೆದಂತೆ. ಇಷ್ಟುಹೊತ್ತಿಗೆ ತೆರೆಯಬೇಕೆಂಬ ನಿಯಮವಿಲ್ಲ ಅವನ ಆಫೀಸಿಗೆ. ತನಗೆ ಖುಷಿ ಬಂದಹೊತ್ತಿಗೆ ತೆರೆಯುವನು, ಖುಷಿ ಬಂದಾಗ ಮುಚ್ಚುವನು, ಅದು ಅವನ ಮರ್ಜಿ. ಯಾವುದಾದರೂ ಗಾಢಾಲೋಚನೆಯಲ್ಲಿ ತೊಡಗಬೇಕಾದ ಪ್ರಮೇಯ ಒದಗಿದಾಗ ಅವನು ಮುಚ್ಚಳವನ್ನು ತೆಗೆದು, ಸಾಮಾನುಗಳೆಲ್ಲದರಮೇಲೆ, ಪದ್ಮಾಸನ ಹಾಕಿಕೊಂಡು ಕುಳಿತುಕೊಳ್ಳುವನು. ಅವನ ಭಾರಕ್ಕೆ ಮುರಿದುಹೋಗುವಷ್ಟು ಪುಸಕಲಾದ ಸಾಮಾನೇನೂ ಇರಲಿಲ್ಲ ಅಲ್ಲಿ. ಮನೆಯಲ್ಲಿ ಕೆಲಸಕ್ಕೆ ಬಾರದೆಂದು ಎಸೆಯಲ್ಪಟ್ಟ ವಸ್ತುಗಳೆಲ್ಲವೂ ಅವನ ಪೆಟ್ಟಿಗೆಗೆ ವಲಸೆ ಹೋಗುತ್ತಿದ್ದವು. ಪ್ರತಿ ಸಂಜೆಯೂ ಡೂಡು ಮನೆಯಸುತ್ತ ಒಂದು ಗಸ್ತು ಹೊಡೆಯುವನು.

ಸಾಮಾನಿನ' ಸಂಗ್ರಹಣವೇ ಆ ಪರ್ಯಟನದ ಉದ್ದೇಶ. ಅಪ್ಪನ ಕೋಣೆಯಲ್ಲಿ ಮೇಜಿನ ಕೆಳಗಿದ್ದ ಬುಟ್ಟಿ ಇವನಿಗೆ ಅನೇಕ ಪದಾರ್ಥಗಳನ್ನು ಸರಬರಾಜು ಮಾಡುತ್ತಿತ್ತು. ಅಗಲಗಲವಾದ ಲಕ್ಕೋಟೆಗಳು, ಬಣ್ಣ ಬಣ್ಣದ ಕ್ಯಾಟಲಾಗುಗಳು, ಕಣ್ಣು ಸೆಳೆಯುವಂಥ ಪುಸ್ತಕಗಳ ರಕ್ಷಾಪತ್ರಗಳು, ಬೇಕಾದಷ್ಟು ಕತ್ತರಿಕಾಗದ, ಹುರಿ, ಟ್ವೈನ್‌ದಾರ ಇವಲ್ಲದೆ ಇನೂ ಏನೇನೋ. ದೊಡ್ಡಣ್ಣನ ಕೊಠಡಿಯ ಕಿಟಕಿಯ ಹೊರಗೆ ಹೋದರೆ ಸಾಕು, ಗೋಲ್ಡ್‌ಫ್ಲೇಕ್ ಸಿಗರೇಟಿನ ಹಳದಿಬಣ್ಣದ ಪ್ಯಾಕೆಟ್‌ಗಳು, ಹೊಳೆ ಹೊಳೆಯುವ ಸಿಗರೇಟ್ ಬೆಳ್ಳಿ, ಬ್ಲೇಡುಗಳು, ರಟ್ಟಿನ ಡಬ್ಬಿಗಳು ಮೊದಲಾದುವೆಲ್ಲ ಸಿಗುತ್ತಿದ್ದುವು. ಅಕ್ಕ ಮನೆಯಲಿಲ್ಲದ ಸಮಯಕಾದು ಡೂಡುವು ಆವಳ ಪೆಟ್ಟಿಗೆಗೆ ಮುತ್ತಿಗೆಹಾಕಿ ಬಣ್ಣದ ದಾರಗಳನ್ನೂ, ಟ್ರೇಸ್ ಕಾಗದವನ್ನೂ ಕೊಳ್ಳೆಹೊಡೆಯುತ್ತಿದ್ದ.

ಹೀಗೆ ದಿನದಿನವೂ ಅವನ ಪೆಟ್ಟಿಗೆಯ ಆಸ್ತಿ ಅಧಿಕವಾಗುತ್ತ ಹೋಗುತ್ತಿತ್ತು. ಮನೆಯಲ್ಲಿ ಎಲ್ಲ ಪೆಟ್ಟಿಗೆಗಳಿಗಿಂತ ಅವನ ಪೆಟ್ಟಿಗೆಯೇ ಭಾರಿಯದಾದರೂ ಪ್ರತಿವಾರದ ಕಡೆಯಲ್ಲೂ ಪೆಟ್ಟಿಗೆ ಭರ್ತಿಯಾಗಿ ಹೋಗಿ ವಸ್ತುಗಳು ಹೊರಗೆ ಕೂಡ ಚೆಲ್ಲತೊಡಗುತ್ತಿದ್ದುವು. ಭಂಡಾರ ಇನ್ನೂ ಬೆಳೆದು ಪೆಟ್ಟಿಗೆಗೂ ಗೋಡೆಗೂ ನಡುವೆ ಇದ್ದ ಪ್ರದೇಶವನ್ನು ಆಕ್ರಮಿಸಿಕೊಂಡು, ಸ್ವಲ್ಪ ದೂರದಲ್ಲಿದ್ದ ಕೋಟ್ ಸ್ಟ್ಯಾಂಡ ಹತ್ತಿರದವರೆಗೆ ಹಬ್ಬುವಂತಾದಾಗ ಅಪ್ಪನ ದೃಷ್ಟಿ ಅದರ ಕಡೆ ಸುಳಿಯುತ್ತಿತ್ತು. ಅಪ್ಪನ ದೃಷ್ಟಿಸುಳಿಯಿತೆಂದರೆ ಡೂಡುವಿಗೆ ಬಹಳ ದುಃಖ ಏಕೆಂದರೆ ಹಾಗಾದಾಗಲೆಲ್ಲ ಅವನ ಪೆಟ್ಟಿಗೆ ಬರಿದಾಗುತ್ತಿತ್ತು. ಅವನ ಐಶ್ವರ್ಯವೆಲ್ಲ ಮನೆಯ ಹಿಂದಿನ ಗಲ್ಲಿಯ ಕಸವಾಗಿ ಮಾರ್ಪಡುತ್ತಿತ್ತು. ಅಪ್ಪ ಬೆನ್ನು ತಿರುಗಿಸಿದರೆಂದರೆ, ಡೂಡು ಚಂಗನೆ ನೆಗೆದು ಕಾಂಪೌಂಡನ್ನು ಬಳಸಿ ಗಲ್ಲಿಯೊಳಕ್ಕೆ ಓಡಿ ಹೋಗಿ, ತನಗೆ ಯಾವುದು ಅತಿ ಮುಖ್ಯ, ಅಗಲಿರಲು ಅಸಾಧ್ಯ ಎಂದು ತೋರುತ್ತಿತ್ತೋ ಅದನ್ನೆಲ್ಲ ಮತ್ತೆ ಆರಿಸಿಕೊಂಡು ಬರುತ್ತಿದ್ದ. ಎದೆಯೊಡೆದು ಒಂದು ಇಡೀ ಗಂಟೆಯಕಾಲ ಮೂಲೆಯಲ್ಲಿ ಕುಳಿತಿರುತ್ತಿದ್ದ. ಆದರೇನಂತೆ? ಅಪ್ಪನಿಗೆ ನಿತ್ಯವೂ ಪೋಸ್ಟು ಬಂದೇ ಬರುತ್ತಿತ್ತು; ಅಕ್ಕ

ಡಿ. ಎಂ. ಸಿ ದಾರ ಕೊಂಡುಕೊಳ್ಳುತ್ತಲೇ ಇದ್ದಳು; ದೊಡ್ಡಣ್ಣನಂತೂ ಸಿಗರೇಟಿನ ಭಕ್ತ. ಡೂಡು ತನ್ನ ಪೆಟ್ಟಿಗೆಯಲ್ಲಿ ಕುಳಿತು, ದುಡ್ಡು ಸಂಪಾದಿಸುವುದಕ್ಕೇನು ಮಾರ್ಗಗಳುಂಟು ಎಂದು ಚಿಂತಿಸುತ್ತಿದ್ದ. ಹಿಂದೊಂದು ಸಲ ಮಾಡಿದ್ದಂತೆ ಮತ್ತೆ ವ್ಯಾಪಾರೋದ್ಯಮವನ್ನು ಕೈಗೊಳ್ಳುವುದು ಸಾಧುವೇ ಎಂಬ ಪ್ರಶ್ನೆಯನ್ನು ವಿಚಾರ ಮಾಡಿ ನೋಡಿದ. ಸೋದರ ಮಾವ ಮಾದರಾಸಿನಿಂದ ಬಂದಾಗ ಡೂಡುವಿಗೆ ಒಂದು ರೂಪಾಯಿ ಕೊಟ್ಟಿದ್ದರು. ರೂಪಾಯನ್ನು ತೆಗೆದುಕೊಂಡು ಡೂಡು ಪೋಸ್ಟ್ ಆಫೀಸಿಗೆ ಹೋಗಿ ಹನ್ನೆರಡು ಬೂದು ಬಣ್ಣದ ಸ್ಟಾಂಪುಗಳು, ನಾಲ್ಕು ಹಸುರು ಸ್ಟಾಂಪು, ನಾಲ್ಕು ಪೋಸ್ಟ್ ಕಾರ್ಡು ಕೊಂಡುಕೊಂಡು ಬಂದಿದ್ದ. ಕೋಳಿ ಕೆರೆದಂತಿದ್ದ ತನ್ನ ಅಕ್ಷರದಲ್ಲಿ "ಸ್ಟಾಂಪುಗಳು ಮಾರಲ್ಪಡುತ್ತವೆ" ಎಂಬುದಾಗಿ ಒಂದು ರಟ್ಟಿನ ಮೇಲೆ ಬರೆದು ಪಕ್ಕದ ಬೀದಿಗೆ ಕಾಣುವಂತೆ ತನ್ನ ಕೋಣೆಯ ಕೊಠಡಿಯ ಹೊರಗೆ ತಗಲುಹಾಕಿದ. ಅವನ ಗಿರಾಕಿಗಳೆಂದರೆ ಮನೆಯಲ್ಲಿ ಹಿರಿಯರು (ಅಪ್ಪನನ್ನು ಮಾತ್ರ ಬಿಟ್ಟು). ತನ್ನ ಸರಕನ್ನು ಕೊಳ್ಳುವುದರಲ್ಲಿ ಅವರು ತೋರಿಸಿದ ವೇಗವನ್ನು ಕಂಡು ಡೂಡುವಿಗೆ ವಿಸ್ಮಯವಾಯಿತು. ಪ್ರತಿ ಸಾಮಾನಿನ ಮೇಲೂ ಮೂರುಕಾಸು ಲಾಭವನ್ನಿಟ್ಟು ಮಾರಿದ. ಗಿರಾಕಿಗಳು ಚೌಕಾಸಿ ಮಾಡದೆಯೇ ಕೊಂಡುಕೊಂಡರು. ಒಂದೇ ಒಂದು ಕಾರ್ಡು ಮಿಕ್ಕಿತ್ತು. ಅದನ್ನು ಕೊಳ್ಳಲು ಪಕ್ಕದ ಮನೆಯಾತ ಬಂದ. ಡೂಡು ಬೆಲೆ ಹೇಳಿದ. ಆತನಿಗೆ ವಿಪರೀತ ಸಿಟ್ಟು ಬಂತು. ಹುಚ್ಚು ಹಿಡಿದವನಂತೆ ಕೂಗಾಡಿ, ಪೋಲೀಸಿನವರಿಗೆ ಫಿರ್ಯಾದು ಕೊಡುವೆನೆಂದು ಗಲಾಟೆ ಮಾಡಿಬಿಟ್ಟ. ಡೂಡುವಿಗೆ ಬಹಳ ದಿಗಿಲಾಯಿತು. ಆದರೂ, ಲಾಭಕ್ಕಲ್ಲದೆ ಹೋದರೆ ಮತ್ತೇಕೆ ತಾನು ಸ್ಟಾಂಪು ಕಾರ್ಡು ಮಾರಬೇಕು, ನೀವೇ ಹೇಳಿ, ಎಂದು ಕೇಳುವಷ್ಟು ಧೈರ್ಯಮಾಡಿದ. ಕಡೆಗೆ ಆ ಗಲಾಟೆ ಆಸಾಮಿಯ ಬಾಯಿ ಮುಚ್ಚಿಸುವುದಕ್ಕಾಗಿ ಬಿಟ್ಟಿಯಾಗಿಯೇ ಕಾರ್ಡನ್ನು ಕೊಡಬೇಕಾಗಿ ಬಂತು. ರೂಪಾಯಿಗೆ ಸ್ಟಾಂಪು ಕಾರ್ಡು ಕೊಂಡು ಲಾಭಕ್ಕೆ ಮಾರಿ, ಅಸಲನ್ನು ಮತ್ತೆ ಸ್ಟಾಂಪುಗಳ ಮೇಲೆಯೇ ವಿನಿಯೋಗಿಸಿ, ಬಂದ ಲಾಭವನ್ನು ಮನಸೋ

ಯಿಚ್ಛೆಯಾಗಿ ಖರ್ಚುಮಾಡಬಹುದೆಂದು ಡೂಡು ಕಾಣುತ್ತಿದ್ದ ಕನಸೆಲ್ಲ ಒಡೆದು ಚೂರುಚೂರಾಯಿತು. ಲಾಭ ಬರುವುದು ಹೋಗಲಿ, ಅಸಲು ಕೂಡ ಗಿಟ್ಟಲಿಲ್ಲ. ಜೇಬಿನ ಮೂಲಕ ನುಸಿದುಹೋಯಿತೆನ್ನೋಣವೆಂದರೆ ಜೇಬಿನಲ್ಲಿ ಯಾವ ತೂತೂ ಇರಲಿಲ್ಲ. ಹೇಗೋ ಏನೋ ಆವಿಯಾಗಿ ಮಾಯವಾಯಿತು; ಹೊಗೆಯಾಗಿ ಹೊರಟು ಹೋಯಿತು. ಅದು ಹೇಗಿರಬಹುದು ?....ಮನೆಯ ಹಿರಿಯರು ನಗದು ಕೊಟ್ಟುಕೊಂಡು ಕೊಂಡಿರಲಿಲ್ಲ; ಸಾಲದ ಮೇಲೆ. ಆದರೆ ಸಾಲ ತೀರಿಸುವುದನ್ನು ಮಾತ್ರ ಮುಂದುವರಿಸುತ್ತಿದ್ದರು. ಯಾವಾಗ ಕೇಳಲಿ 'ಚಿಲ್ಲರೆಯಿಲ್ಲ' 'ಚಿಲ್ಲರೆಯಿಲ್ಲ'. ಡೂಡು ಈ ವ್ಯವಹಾರವನ್ನೆಲ್ಲ ಮರೆತೇ ಬಿಟ್ಟು ಸುಮ್ಮನಾದನು. ಆದರೆ ಒಂದು ಮಧ್ಯಾಹ್ನ ಯಾರೋ ಮನೆಯೊಳಕ್ಕೆ ಬಂದು ಹದಿನಾರು ಕಾರ್ಡು ಅರ್ಧಾಣೇ ಸ್ಟಾಂಪು ಹತ್ತು ಕೊಡಿ ಎಂದು ಕೇಳಿದರು. ಅಪ್ಪನಿಗೆ ತುಂಬ ಆಶ್ಚರ್ಯವಾಯಿತು. ಈ ದೃಶ್ಯವನ್ನೆಲ್ಲ ಬಾಗಿಲಹಿಂದೆ ಬಚ್ಚಿಟ್ಟುಕೊಂಡು ನೋಡುತ್ತಿದ್ದ ಡೂಡುವಿನ ಮುಖ ಬಿಳುಪೇರಿತು. "ನಿಮ್ಮ ಹಾದಿ ಹಿಡಿದು ನೀವು ಹೋಗಬಹುದು" ಎಂದು ಅಪ್ಪ ಹೇಳಿದರು. ಅದಕ್ಕೆ ಆತ "ಖಂಡಿತ ಆಗಬಹುದು ಸ್ವಾಮಿ; ಕಿಟಕಿ ಹೊರಗಡೆ ಬೋರ್ಡು ಹಾಕಿಕೊಂಡಿದ್ದಿರಿ, ಬಂದೆ. ಇಲ್ಲದಿದ್ದರೆ ನನಗೇನು ಕೆಲಸ ಇಲ್ಲ?" ಎಂದು ಹೇಳಿ ಹೊರಟುಹೋದರು. ಅಪ್ಪ ಬಂದು ನೋಡಿ, ರಟ್ಟನ್ನು ಕಿತ್ತು ಹರಿದುಹಾಕಿ, ಕಾಲಿಂದ ತುಳಿದು, ಡೂಡುವನ್ನು ಕೂಗಿ ರೇಗಾಡಿದರು. ತನ್ನ ಅಂಗಡಿಯನ್ನು ಮುಚ್ಚಿದ ಮೇಲೆ "ಸ್ಟಾಂಪುಗಳು ಮಾರಲ್ಪಡುತ್ತವೆ" ಎಂಬ ಬೋರ್ಡನ್ನು ತೆಗೆಯುವುದನ್ನು ಡೂಡು ಮರೆತುಬಿಟ್ಟಿದ್ದ. ಅದೇ ಕೊನೆಯಾಯಿತು ಅವನ ವ್ಯಾಪಾರೋದ್ಯಮಕ್ಕೆ.

ಸರಿ. ಪೆಟ್ಟಿಗೆಯಲ್ಲಿ ಕೂತುಕೊಂಡು ಡೂಡು ತನ್ನ ಹಿಂದಿನ ಅನುಭವಗಳಿಂದ ಕಲಿತ ಪಾಠಗಳನ್ನೆಲ್ಲ ಲೆಕ್ಕಮಾಡುತ್ತಿದ್ದ. ಪಾಠ ಒಂದು— ಹಿರಿಯರಿಂದ ಸಹಾಯವೇ ಆಗಲಿ, ಸಹಾನುಭೂತಿಯೋ ಆಗಲಿ ಸಿಗುವುದಿಲ್ಲ. ಪಾಠ ಎರಡು—ಸೋದರಮಾವ ಮತ್ತೊಮ್ಮೆ ಒಂದು ರೂಪಾಯಿ ಕೊಟ್ಟರೆ ಈ ಬಗೆಯ ವ್ಯಾಪಾರ ಯೋಜನೆಗಳಿಗೆ ಅದನ್ನು ಖರ್ಚುಮಾಡ

ಬಾರದು. ಸ್ಟಾಂಪುಗಳನ್ನು ಕೊಳ್ಳುವುದೂ ಮಾರುವುದೂ ಹುಚ್ಚು ಕೆಲಸ. ಕೊಳ್ಳುವುದೇನೋ ಸರಿಯಾಗಿಯೇ ಇರುತ್ತಿತ್ತು. ಆದರೆ ಮಾರುವುದು ಇದೆಯಲ್ಲಾ—ಅದನ್ನು ಮಾರುವುದೆಂದೇ ಕರೆಯಕೂಡದು. ಧರ್ಮಕ್ಕೆ ಕೊಟ್ಟಹಾಗೆ ಆಗಿತ್ತು.....ಡೂಡು ಕಿಟಕಿಯಿಂದ ಹೊರಗಡೆ ನೋಡಿದ. ಒಬ್ಬ ಮನುಷ್ಯ ತೆಂಗಿನಮರ ಹತ್ತುತ್ತಿದ್ದ. ಮರದ ಸುಳಿಯಲ್ಲಿದ್ದ ಹುಳು ಗಳನ್ನು ಕಿತ್ತುಹಾಕಿ ದುಡ್ಡು ಸಂಪಾದಿಸುವುದೇ ಆ ಮನುಷ್ಯನ ಕಸಬು.

ಡೂಡು ಪೆಟ್ಟಿಗೆಯಿಂದ ಹೊರಕ್ಕೆ ತೆಗೆದು ತೆಂಗಿನಮರದ ಹತ್ತಿರಕ್ಕೆ ಓಡಿದ.

"ಅಯ್ಯಾ, ನಿನಗೆ ನಿತ್ಯವೂ ಎಷ್ಟು ದುಡ್ಡು ಬರುತ್ತಯ್ಯಾ?" ಎಂದು ಕೇಳಿದ ಮೇಲುಗಡೆ ನೋಡುತ್ತ.

"ಎರಡು ರೂಪಾಯಿ"—ಕೂಲಿಯವನು ಮರದ ಮೇಲಿಂದ ಉತ್ತರವಿತ್ತ.

"ಎರಡು ರೂಪಾಯಿ! ಹಾಗಾದರೆ ಬೇಕಾದಷ್ಟು ದುಡ್ಡು ಮಾಡ್ತಾ ಇರಬೇಕು ನೀನು! ತುಂಬ ಹೆಚ್ಚಲ್ಲವೆ ನಿನಗೆ ಬರೋ ದುಡ್ಡು?"

ಕೂಲಿಯವನು ನಕ್ಕು, ಮನೆಯಲ್ಲಿದ್ದ ಹೆಂಡತಿ ಮಕ್ಕಳ ವಿಷಯ ಏನೋ ಹೇಳಿದ. ಡೂಡುವಿಗೆ ಈ ಮೊಬಲಗು ಅಗಾಧವಾಗಿ ಕಂಡಿತು. ಅಷ್ಟು ದುಡ್ಡಿದ್ದರೆ ಏನುತಾನೇ ಕೊಳ್ಳುವುದಕ್ಕಾಗುವುದಿಲ್ಲ! ಆಕಾಶಕ್ಕೆ ತಗಲುವಷ್ಟು ಎತ್ತರ ಪಟಾಕಿಗಳ ರಾಶಿ ಹಾಕಬಹುದು, ಪೆಟ್ಟಿಗೆ ಪೆಟ್ಟಿಗೆಗಳ ಭರ್ತಿ ಪೆನ್ಸಿಲ್‌ಗಳು ಪೆಪ್ಪರಮಿಂಟುಗಳು ತುಂಬಬಹುದು.

"ನಾನೂ ಸಂಪಾದಿಸುವುದಕ್ಕಾಗುತ್ತೆಯಾ?" ಎಂದು ಕೇಳಿದ ಡೂಡು.

"ಓಹೋ! ಆಗದೆ ಏನಂತೆ?"

ಆದರೆ ತೆಂಗಿನಮರ ಎಷ್ಟು ಎತ್ತರವಾಗಿರುತ್ತದೆ! ಅದರ ತುದಿ ಯಲ್ಲೇನೋ ಎರಡು ರೂಪಾಯಿ ಸಿಗುತ್ತದೆ. ಆದರೆ ಹತ್ತಿಹೋಗುವುದು ಹೇಗೆ?

ಅಯ್ಯಾ, ಕೂಲಿಯವನೆ, ಆ ಹುಳು ಕೆಳಗಡೆಯೆಲ್ಲೂ ಸಿಗೊಲ್ಲವೆ? ಮರಾನ ಹತ್ತಿಯೇ ಹೋಗಬೇಕೇ?" ಎಂದು ಕೇಳಿದ ಡೂಡು.

ಹೌದು. ಮರದ ತುದೀಲಿ ಮಾತ್ರವೇ ಆ ಹುಳು ಇರೋದು. ಆ ಹುಳು ಚಿಗುರನ್ನೆಲ್ಲ ತಿಂದುಹಾಕುತ್ತೆ. ಅದನ್ನು ಹುಡುಕಿ ಕಿತ್ತು ಹಾಕೋದೇ ನನ್ನ ಕಸಬು. ಮರಕ್ಕೆ ಎರಡಾಣೆಕೊಡ್ತಾರೆ ನಂಗೆ" ಒಂದೆರಡು ಎಳೆಯ ಎಲೆಗಳನ್ನು ಕಿತ್ತು ಕೂಲಿಯವನು ಕೆಳಕ್ಕೆ ಬಿಸಾಕಿದ. ಡೂಡು ಒಂದನ್ನು ಎತ್ತಿಕೊಂಡ. ಎಷ್ಟು ಚೆನ್ನಾಗಿತ್ತು! ಎಳೆಯದಾಗಿ ಹಳದಿಯಾಗಿ, ಉದ್ದವಾಗಿ, ಎಷ್ಟು ಹೊಳೆಯುತ್ತಿತ್ತು! ಅದರ ಮೇಲೆ ಡೂಡು ತನ್ನ ಉಗುರಿನಿಂದ ಸ್ವಲ್ಪ ಕೆರೆದ. ಗುರುತಾಯಿತು, ಸ್ಪಷ್ಟವಾಗಿ ಗುರುತಾಯಿತು. ಕೊಂಚ ಹೊತ್ತಾದ ಮೇಲೆ ಗುರುತು ಕೆಂಪುಬಣ್ಣಕ್ಕೆ ತಿರುಗಿತು. ಇನ್ನೊಂದು ಎಲೆಯನ್ನು ಎತ್ತಿಕೊಂಡು ಅದರ ಮೇಲೆ ತನ್ನ ಹೆಸರನ್ನು ಬರೆದ. ವ್ಹಾ! ಎಷ್ಟು ಅದ್ಭುತವಾಗಿತ್ತು! ಅವನಿಗೊಂದು ಯೋಚನೆ ಹೊಳೆಯಿತು. ದೊಡ್ಡಣ್ಣ ಅಮ್ಮನಿಗೆ ಹೇಳುತ್ತಿದ್ದ ಸಂಗತಿ ಜ್ಞಾಪಕವಾಯಿತು. ದೊಡ್ಡಣ್ಣನ ಸ್ನೇಹಿತರು ಯಾರೋ, ಯಾವುದೋ ಲೈಬ್ರರಿಗೆ ತಾಳೆಗರಿಯೊಂದನ್ನು ತೆಗೆದುಕೊಂಡು ಹೋದರಂತೆ. ಅದರ ಮೇಲೆ ಏನೋ ಬರೆದಿದ್ದರಂತೆ. ಲೈಬ್ರರಿಯವರು ದುಡ್ಡು ಕೊಟ್ಟರಂತೆ .... ದುಡ್ಡಿದೆಯಯ್ಯಾ ತಾಳೆಗರೀಲಿ!

ಮಾರನೆಯ ದಿನ ಬೆಳಿಗ್ಗೆ ಯಾವುದೋ ಮಾತೆತ್ತಿಕೊಂಡು ಡೂಡು ದೊಡ್ಡಣ್ಣನನ್ನು ತಾಳೆಯ ಗರಿಯ ವಿಷಯ ವಿಚಾರಿಸಿದ. ಕತೆ ಹೊರ ಬಿತ್ತು. ಆರ್ಕಿಯಾಲಜಿ ಡೈರೆಕ್ಟರಾದ ಡಾಕ್ಟರ್ ಐಯ್ಯಂಗಾರ್ಯರು ದೊಡ್ಡಣ್ಣನ ಸ್ನೇಹಿತರಿಂದ ತಾಳೆಗರಿಯ ಮೇಲೆ ಬರೆದಿದ್ದಂಥ ಒಂದು ಇತಿಹಾಸದ ಗ್ರಂಥವನ್ನು ಕೊಂಡುಕೊಂಡರಂತೆ, ಓರಿಯೆಂಟಲ್ ಲೈಬ್ರರಿಗಾಗಿ. ಡೈರೆಕ್ಟರ್ ಹೆಸರು ಲೈಬ್ರರಿ ಹೆಸರು ಬಂದಾಗ ಡೂಡು ಬಹಳ ಕಿವಿಗೊಟ್ಟು ಕೇಳಿದ.

ಆ ಮಧ್ಯಾಹ್ನ ಡೂಡು ಲೈಬ್ರರಿಯ ದಾರಿ ಕಂಡುಕೊಂಡು ಅಲ್ಲಿಗೆ

ಹೋದ. ಪಟಾಕಿ ಮತಾಪುಗಳಿಗೆ ಲೇಶವಾದರೂ ಅಭಾವವಿಲ್ಲದಂಥ ದೀಪಾವಳಿಯ ಚಿತ್ರ ಅವನ ಕಣ್ಣಮುಂದೆ ಕುಣಿಯುತ್ತಿತ್ತು.

ಆ ಹಳದಿ ಕಟ್ಟಡ, ಅದರ ಭಾರಿ ಗೋಪುರ—ಅವನ್ನು ನೋಡಿ ಡೂಡುವಿಗೆ ಸ್ವಲ್ಪ ಭಯವಾಯಿತು. ಒಳಕ್ಕೆ ಹೋಗುವುದಕ್ಕೆ ಬಿಡುತ್ತಾರೋ ಇಲ್ಲವೋ ಎಂದು ಅವನಿಗೆ ಶಂಕೆಯಾಯಿತು. ಒಂದು ಬಾಗಿಲ ಹೊರಗೆ ಒಬ್ಬ ಜವಾನನು ಮೊಣಕಾಲು ಮುದುರಿಕೊಂಡು, ಅದರ ಮೇಲೆ ತಲೆಯಿಟ್ಟುಕೊಂಡು ತೂಕಡಿಸುತ್ತಿದ್ದ. ಡೂಡು ಭಯಭಕ್ತಿಯಿಂದ "ಸಾಹೇಬರನ್ನು ನೋಡೋಕೆ ಬಂದಿದ್ದೇನೆ. ಬಹಳ ಅರ್ಜೆಂಟ್ ಕೆಲಸ ಇದೆ" ಎಂದು ಹೇಳಿದ. ಆದರೆ ಜವಾನ ಕಿವಿಯ ಮೇಲೆಯೇ ಹಾಕಿಕೊಳ್ಳಲಿಲ್ಲ. ಅವನಿಗೆ ತುಂಬ ನಿದ್ದೆ.

ಡೂಡು ಕಟ್ಟಡದೊಳಕ್ಕೆ ಹೋದ. ಅಷ್ಟು ದೊಡ್ಡ ಕಟ್ಟಡಕ್ಕೆ ತಾನು ತೀರ ಚಿಕ್ಕವನು ಎನಿಸಿತು ಅವನಿಗೆ ಎಲ್ಲವೂ ಭಾರಿ ಭಾರಿಯಾಗಿ ಕಾಣುತ್ತಿವೆ! ಎಲ್ಲಿ ನೋಡಲಿ ಕಲ್ಲಿನ ಪ್ರತಿಮೆಗಳು, ಕಲ್ಲಿನ ಹಲಗೆಗಳು, ಅದರ ತುಂಬ ಏನೇನೋ ಕೊರೆತಗಳು ಕಣ್ಣು ಚುಚ್ಚುವಂಥ ಬಣ್ಣಗಳ ಸರಿಗೆ ಶಾಲುಗಳನ್ನು ಹೊದ್ದುಕೊಂಡು ಹತ್ತಾರು ಜನ ಪಂಡಿತರು ತಾಳೆಯೆಲೆಗಳನ್ನು ನೋಡುವುದರಲ್ಲೇ ಮಗ್ನರಾಗಿದ್ದರು. ಅಲ್ಲಿಂದ ಕಂಬಿ ಕೀಳುವದೇ ವಾಸಿ ಎಂದು ಸ್ವಾಮಿಗೆ ತೋರಿತು. ಅಷ್ಟು ಭಯಹುಟ್ಟಿಸುವಂತಿತ್ತು ಪ್ರತಿಯೊಂದೂ ಅಲ್ಲಿ. ಎದೆಯ ಬಡಿತಕ್ಕೆ ಹಜಾರವೆಲ್ಲ ಮಾರುದನಿ ಕೊಡುತ್ತಿದೆಯೇನೋ ಎನ್ನಿಸಿತು.

ಆದರೆ ಸ್ವಾಮಿ ಸೋಲಲಿಲ್ಲ. ಇದ್ದ ಧೈರ್ಯವನ್ನೆಲ್ಲ ಕೂಡಿಸಿಕೊಂಡು ಒಂದು ಭಾರಿ ಮೇಜಿನ ಹತ್ತಿರ ಹೋದ. ಅದರಾಚೆ ಒಬ್ಬ ಮಹಾವ್ಯಕ್ತಿ, ಕನ್ನಡಕ, ಜರತಾರಿ ಪೇಟ ಎಲ್ಲ ಹಾಕಿಕೊಂಡವರು, ಕುರ್ಚಿಯಲ್ಲಿ ಕುಳಿತಿದ್ದರು.

" ಸಾರ್ " ಎಂದ ಡೂಡು ಬಹಳ ಗೌರವದಿಂದ. ಆ ಅತಿಶಯವಾದ ಗೌರವದಲ್ಲಿ ಅವನ ಮಾತು ಮೌನದ ಮೇರೆಯನ್ನು ಕೂಡ ಮೀರಲಿಲ್ಲ. ಮಹಾವ್ಯಕ್ತಿಗೆ ಕೇಳಿಸಲಿಲ್ಲ.

"ಸಾರ್" ಎಂದು ಡೂಡು ಇನ್ನೊಂದು ಸಲ ಕರೆದ. ಹಿಂದಿನ ಸಲಕ್ಕೆ ಪರಿಹಾರ ಮಾಡುವುದಕ್ಕೋ ಎಂಬಂತೆ ಈಸಲ ಆವನ ಗಂಟಲು ತೀರ ದೊಡ್ಡದಾಗಿಬಿಟ್ಟಿತ್ತು. ಡೂಡುವಿಗೆ ತುಂಬ ಅವಮಾನವಾಗಿ ಹೋಯಿತು.

ಮಹಾವ್ಯಕ್ತಿ ಈ ಸದ್ದನ್ನು ಕೇಳಿ ಬೆಚ್ಚಿಬಿದ್ದು, ಸುತ್ತಲೂ ನೋಡಿದರು ಆ 'ಸಾರ್' ಎಲ್ಲಿಂದ ಬಂತು ತಿಳಿದುಕೊಳ್ಳುವುದಕ್ಕಾಗಿ.

"ನೀವು ಡಾಕ್ಟರೇ?" ಎಂದು ಕೇಳಿತು ಆ ದನಿ. ದೇಹರಹಿತವಾದ ಈ ದನಿ ಎಲ್ಲಿಂದ ಬಂತೆಂದು ತಿಳಿಯದೆ ಮಹಾವ್ಯಕ್ತಿಗೆ ದೊಡ್ಡ ಒಗಟಾಯಿತು. ಕಣ್ಣಲ್ಲಿ ಕಣ್ಣಿಟ್ಟು ನೋಡಿದರೆ, ಮೇಜಿನ ಇನ್ನೊಂದು ಅಂಚಿನಲ್ಲಿ ಮೇಜಿನ ಮಟ್ಟಕ್ಕೆ ಸರಿಯಾಗಿ ಯಾವುದೋ ಒಂದು ಪುಟ್ಟ ಕ್ರಾಪು ಕಾಣಿಸಿತು. ಮಹಾವ್ಯಕ್ತಿ ಕುರ್ಚಿಯನ್ನು ಹಿಂದಕ್ಕೆ ನೂಕಿ ಎದ್ದು ನಿಂತರು. ಒಬ್ಬ ಚಿಕ್ಕ ಹುಡುಗ, ಕೊಳೆಯಾದ ಕೋಟು, ಮೋಟು ಚೆಡ್ಡಿ ಹಾಕಿದ ಪುಟ್ಟ ಪೋರ, ಮೇಜಿನ ಆ ಕಡೆ ನಿಂತಿರುವುದನ್ನು ಕಂಡು ಆತನಿಗೆ ತುಂಬ ಸೋಜಿಗವಾಯಿತು.

"ಏನು ಮಾಡ್ತಾ ಇದ್ದೀಯಯ್ಯಾ ಇಲ್ಲ?" ಎಂದು ಕೇಳಿದರು.

"ನಾನು ಒಬ್ಬರು ಡಾಕ್ಟರನ್ನು ನೋಡೋಕೆ ಬಂದಿದ್ದೀನಿ,....ನೀವು ಡಾಕ್ಟರಾ?" ಎಂದ ಡೂಡು.

"ಹೌದು. ನೀನು ಯಾರು?"

ಡೂಡು ಕುರ್ಚಿಯನ್ನು ಹತ್ತಿ ಅದರ ಮೇಲೆ ನಿಂತುಕೊಂಡ.

"ನೀವು ಡಾಕ್ಟರಾದರೆ, ನಿಮಗೆ ಬೇಕಾದಂಥ ಸಾಮಾನು ತಂದಿದ್ದೀನಿ. ಓಲೆಗರಿಯ ಮೇಲೆ ಏನಾದರೂ ಬರೆದಿರೋ ಅಂಥಾದ್ದು ಸಿಕ್ಕಿದರೆ ತುಂಬ ದುಡ್ಡು ಕೊಡ್ತೀರಂತೆ ನೀವು. ಯಾರೋ ಹೇಳಿದರು. ಅಂಥಾದ್ದಕ್ಕೆ ನಾನೂರು ಐನೂರು ರೂಪಾಯಿ ಕೂಡ ಕೊಡ್ತೀರಂತೆ.'' ಎಂದು ಹೇಳಿ ಡೂಡು ತನ್ನ ಜೇಬಿಂದ ಮುದುರಿದ ಕೆಲವು ಎಲೆಗಳ ಚೆಂಡೊಂದನ್ನು ತೆಗೆದು ಡಾಕ್ಟರಿಗೆ ಕೊಟ್ಟನು. ಕೆಲಸ ಮಾಡಿ ಮಾಡಿ ಬೇಸರವಾಗಿದ್ದ ಡಾಕ್ಟರಿಗೆ ಈ ರೀತಿಯ ಅವಕಾಶ ಸಿಕ್ಕಿದರೆ ಸಾಕೆನಿಸಿತ್ತು. ಬಹಳ ಕುತೂ

ಹಲದಿಂದ ಗರಿಗಳನ್ನು ಪರೀಕ್ಷಿಸಿದರು. ಒಂದರ ಮೇಲೆ ಒಂದು ಹೂಜಿ, ಒಂದು ಮೂಗು, ಒಂದು ಕುದುರೆ ಇವುಗಳ ಚಿತ್ರ ಜೊತೆಗೆ 'ಡೂಡು' ಎಂಬ ಹೆಸರು ಇಷ್ಟೂ ಇದ್ದುವು. ಇನ್ನೊಂದು ಗರಿಯಮೇಲೆ ಈ ಕೆಲವು ಸ್ವಾರಸ್ಯವಾದ ಘೋಷಣೆಗಳಿದ್ದುವು; "ಹಸುವು ಸಾಧುವಾದ ಪ್ರಾಣಿ. ಇದು ರಾಮನ ಪುಸ್ತಕ"........ಹಳೆಯ ಕನ್ನಡ ಬಾಲಬೋಧೆಯಿಂದ ಆರಿಸಿದ ವಾಕ್ಯಗಳವು. ಮೂರನೆಯದರ ಮೇಲೆ ಇಂಗ್ಲಿಷಿನಲ್ಲಿ ಈ ರೀತಿ ಬರೆದಿತ್ತು: ಕಾಟ್, ಆಕ್ಸ್, ಪಿಗ್, ಬೇರ್, ಬೇಬಿ, ಎಎಎ ಬಿ ಎಸ್ ಡಿಜಿಸಿ."

ಈ ಉಲ್ಲೇಖಗಳನ್ನು ಬಿಡಿಸಿ ಓದುವುದು ಡಾಕ್ಟರಿಗೆ ಕಷ್ಟವಾಗಲಿಲ್ಲ. ನೂರಾರು ವರ್ಷಗಳ ಹಿಂದೆ ಬದುಕಿದ್ದ ಅರಸರು ಕಲ್ಲಿನಲ್ಲಿ, ತಾಮ್ರದ ತಗಡಿನಲ್ಲಿ, ಕೆತ್ತಿಸಿದ್ದ, ಇದಕ್ಕಿಂತ ಕಷ್ಟವಾದಂಥ ಶಾಸನಗಳನ್ನೆಲ್ಲ ಆತ ಬಿಡಿಸಿದ್ದರು. ಡೂಡುವಿನ ಕೈಬರೆಹ— ದೊಡ್ಡದಾಗಿ, ಸೊಟ್ಟದಾಗಿ, ವಂಕಿ ವಂಕಿಯಾಗಿದ್ದರೂ ಕೂಡ—ಇತ್ತೀಚಿನ ಕಾಲಕ್ಕೆ ಸೇರಿದುದೆಂದು ಕಂಡು ಹಿಡಿಯುವುದು ಅವರಿಗೆ ಕಷ್ಟವಾಗಲಿಲ್ಲ.

ಇದನ್ನು ಓದಿ ಮುಗಿಸಿದ ತಕ್ಷಣ ಆತ ಗಟ್ಟಿಯಾಗಿ ನಕ್ಕರು.

ಡೂಡುವಿಗೆ ಅಸಮಾಧಾನವಾಯಿತು. ತನ್ನನ್ನು ಕಂಡು ನಗುವುದಕ್ಕೆ ಈ ಡಾಕ್ಟರಿಗೇನು ಹಕ್ಕುಂಟು ಎಂದು ತನಗೆತಾನೇ ಹೇಳಿಕೊಂಡ. ತನಗೆ ತಾಳೆಗರಿ ಬೇಡದಿದ್ದರೆ ಕೊಟ್ಟುಬಿಡಬೇಕು ವಾಪಸ್ಸು. ಬೇರೆ ಯಾರಾದರೂ ಡಾಕ್ಟರಿಗೆ ಮಾರಿದರೆ ಆಯಿತು.....ಆದರೆ ಇದೊಂದನ್ನೂ ಗಟ್ಟಿಯಾಗಿ ಹೇಳಲಿಲ್ಲ.

"ಈ ತರಹದ ಸಾಮಾನುಗಳಿಗೆ ನಾನು ದುಡ್ಡು ಕೊಡ್ತೀನಿ ಅಂತ ಯಾರು ಹೇಳಿದರು ನಿನಗೆ?" ಎಂದು ಕೇಳಿದರು ಡಾಕ್ಟರು.

ದೊಡ್ಡಣ್ಣ ಹೇಳಿದ ಕತೆಯನ್ನು ಡೂಡು ಒಪ್ಪಿಸಿದ.

ಡಾಕ್ಟರ ಮುಖದಲ್ಲಿ ಮತ್ತೊಂದು ನಗು ಹೊಳೆಯಿತು. "ನೀನು ತುಂಬ ಜಾಣಹುಡುಗ. ನನಗೇನು ಬೇಕಾಗಿತ್ತೋ ಅದನ್ನೇ ತಂದಿದ್ದೀಯೆ. ನಾನು ಇದನ್ನು ಕೊಂಡುಕೊಳ್ಳುತ್ತೇನೆ" ಎಂದರು.

ಗರಿಗಳನ್ನು ತೆಗೆದುಕೊಂಡು, ತಮ್ಮ ಜೇಬಿನಲ್ಲಿದ್ದ ತಾಮ್ರದ ನಾಣ್ಯಗಳನ್ನೆಲ್ಲ ಎತ್ತಿ ಡೂಡುವಿಗೆ ಕೊಟ್ಟರು. ಸುಮಾರು ಆರಾಣೆಗಳಿರಬಹುದು. ಆದರೆ ತಾಮ್ರದ ನಾಣ್ಯಗಳಲ್ಲಿ ಆರಾಣೆಯೆಂದರೆ ತುಂಬ ಇದ್ದಂತೆ ಕಾಣುತ್ತೆ. ಡೂಡು ವಿಶೇಷ ತೃಪ್ತಿಯಿಂದ ಹಣವನ್ನು ಸ್ವೀಕರಿಸಿದ.

"ನೀನು ಯಾರ ಮಗನಪ್ಪಾ?" ಎಂದರು ಡಾಕ್ಟರು.

ಉತ್ತರ ಹೇಳಲು ಡೂಡುವಿಗೆ ಇಷ್ಟವಿರಲಿಲ್ಲ. ವ್ಯವಹಾರವೆಲ್ಲ ರಹಸ್ಯವಾಗಿರಬೇಕೆಂದು ಅವನ ಆಶಯ.

"ನಂಗೆ ಗೊತ್ತಿಲ್ಲ........ನಮ್ಮ ತಂದೆ ಯಾವುದೋ ಆಫೀಸಿಗೆ ಹೋಗ್ತಾರೆ" ಎಂದ ಏನೂ ತಿಳಿಯದವನಂತೆ.

"ನಿನ್ನ ಹೆಸರೇನು?"

ಡೂಡು ಕೊಂಚತಾಳಿ, "ರಾಮಸ್ವಾಮಿ" ಎಂದ. ಅದು ಸುಳ್ಳು. ಅವನ ನಿಜವಾದ ಹೆಸರು ಮನೆಯಲ್ಲಿ "ಡೂಡು" ಅಂತ, ಸ್ಕೂಲಲ್ಲಿ "ಲಕ್ಷ್ಮಣ" ಅಂತ.

"ಒಳ್ಳೆಯದಣ್ಣಾ, ರಾಮಸ್ವಾಮಿ. ಜೋಪಾನವಾಗಿ ಮನೆಗೆ ಹೋಗ್ತೀಯಾ? ಫುಟ್‌ಪಾತ್ ಮೇಲೆಯೇ ನಡೆದುಕೊಂಡು ಹೋಗು. ರೋಡಿನಲ್ಲಿ ತುಂಬ ಮೋಟಾರು ಬೈಸಿಕಲ್ಲು ಇರುತ್ತೆ" ಎಂದರು ಡಾಕ್ಟರು.

ಚಿರುತಿಂಡಿ ಮಾರುವ ಮುದುಕಿಯ ಮುಂದೆ ಕುಳಿತು, ಡೂಡು ಮೂರುಕಾಸಿನ ಕಡಲೇಕಾಯನ್ನು ಕೊಂಡುಕೊಂಡು ಜೇಬಿನೊಳಕ್ಕೆ ಇಳಿಯಬಿಟ್ಟು, ಇನ್ನೊಂದು ಮೂರುಕಾಸು ಕೊಟ್ಟು ಒಂದು ಪರಂಗಿ ಹಣ್ಣಿನ ಚೂರನ್ನು ಕೊಂಡುಕೊಂಡು ಅದನ್ನು ತಿಂದು ಮುಗಿಸಿದ. ನಡುಹಗಲಿನ ಕಡುಬಿಸಿಲಲ್ಲಿ, ಎದುರಿಗಿದ್ದ ಹಸುರು ಮೈದಾನದಲ್ಲಿ ಹಸುಗಳು ಮೇಯುತ್ತಿದ್ದುವು. ಡೂಡು ಅವುಗಳನ್ನೇ ದಿಟ್ಟಿಸಿನೋಡಿದ. ಮನಸ್ಸಿನಲ್ಲಿ ಸಂತೋಷ ತುಂಬಿತ್ತು.



# ಒಡೆದು ಹೋಗದ ಗೊಂಬೆ

ಸಾಯಂಕಾಲ ಅಪ್ಪ ಮನೆಗೆ ಬಂದಾಗ ಲೀಲಳ ಉತ್ಸಾಹವನ್ನು ನೋಡಬೇಕು. ಸಂತೋಷದ ಭರದಲ್ಲಿ ಚಪ್ಪಾಳೆ ತಟ್ಟಿಕೊಂಡು ಕುಣಿದಾಡಿ ಅಪ್ಪ ಮೆಟ್ಟಲುಹತ್ತಿ ವರಾಂಡದೊಳಕ್ಕೆ ಬಂದೊಡನೆ ಓಡಿಹೋಗಿ ಅವರ ಕಾಲುಗಳನ್ನು ಕಟ್ಟಿಕೊಂಡುಬಿಟ್ಟಳು. ಪಕ್ಕದಲ್ಲಿ ನಿಂತಿದ್ದ ಅಮ್ಮ "ಈವತ್ತಾದರೂ ನಿಮ್ಮ ಮಾತು ಉಳಿಸಿಕೊಳ್ಳುತ್ತೀರೋ ಹೇಗೆ?" ಎಂದು ಕೇಳಿದಳು.

"ಸರಿಹೋಯಿತು. ಮತ್ತಿನ್ನೇಕೆ ಇಷ್ಟುಬೇಗ ಆಫೀಸಿನಿಂದ ಬಂದೆ ಎಂದುಕೊಂಡೆ? ಮತ್ತೊಂದು ಸಲ ಮಗುವಿನ ಮನಸ್ಸು ಮುರಿಯುತ್ತೇನೆಯೆ?....ಅದಿರಲಿ. ನನಗೇನಾದರೂ ಕುಡಿಯುದಕ್ಕೆ ಕೊಟ್ಟು ರೆಡಿಯಾಗು"

"ನನ್ನನ್ನೇಕೆ ಕರೀತೀರಿ? ನಾನು ಹೋಗಿ ಸೀರೆ ಬದಲಾಯಿಸಿಕೊಂಡು ಬರಲಾರೆ ಈಗ."

"ಬದಲಾಯಿಸಲೂ ಬೇಡ, ಗಿದಲಾಯಿಸಲೂ ಬೇಡ. ಇದ್ದಹಾಗೆಯೇ ಮುದ್ದಾಗಿದ್ದೀಯ ನೀನು."

"ಹೋಗೀಂದ್ರೆ. ನನಗೆ ಮನೆಬಿಟ್ಟು ಕದಲುವುದಕ್ಕೆ ಸಾಧ್ಯವಿಲ್ಲ. ನಾನು ಬರದೇಹೋದರೆ ನಿಮಗೆ ಗೊಂಬೆ ತರುವುದಕ್ಕೆ ತಿಳಿಯೊಲ್ಲವೇನೋ ಪಾಪ?"

"ತಿಳಿಯೊಲ್ಲ...........ಇನ್ನೇನು?............ನಿನಗೂ ಏನೋಬೇಕು ಅಂತಿದ್ದೆ?"

"ಹೌದು....ಆದರೆ...."

ಲೀಲಳ ಸಹನೆ ಮೀರಿತು. "ಬಾಪ್ಪಾ, ಹೋಗಿ ಗೊಂಬೆ ತರೋಣ"

ಮೂವರೂ ಮೂರ್ ಮಾರ್ಕೆಟ್ಟಿಗೆ ಹೊರಟರು. ಕಾರಿನಿಂದ ಇಳಿಯುವಾಗ ಅಮ್ಮ ಹೇಳಿದಳು "ಒಂದಷ್ಟು ತರಕಾರಿಯನ್ನೂ ಕೊಂಡುಕೊಳ್ಳಬೇಕು" ಎಂದು.

“ ತರಕಾರಿ ಬೇಡ. ನನಗೆ ಗೊಂಬೆ ಬೇಕು ”

“ ನಿನಗೆ ನಿನ್ನ ಗೊಂಬೆ ಬರುತ್ತೆ. ಸುಮ್ಮನಿರೇ, ಮಾತುಮಾತಿಗೂ ಬಾಯಿ ಹಾಕಬೇಡ ”

“ ಆಗಲೀಮ್ಮ, ಆದರೆ.... ”

“ ನನಗೆ ಜಾಕೇಟ್ಟುಗಳೇ ಇಲ್ಲ. ಒಂದಷ್ಟು ಸಿಲ್ಕ್ ಬಟ್ಟೆ ತೊಗೋ ಬೇಕು. ”

“ ಅಮ್ಮ ನನಗೆ ಸಿಲೋಲಾಯಿಡ್ ಬೊಂಬೆ ಬೇಡಮ್ಮ, ನನಗೆ....

“ ಲೇ ಲೀಲಾ, ಹರಟೋದನ್ನು ನಿಲ್ಲಿಸ್ತೀಯೋ ಇಲ್ಲವೋ ? ”

ಮೂರ್ ಮಾರ್ಕೆಟ್ಟಿನಲ್ಲಿ ಕಾಲಿಟ್ಟೊಡನೆಯೇ ಲೀಲಳಿಗೆ ಹುಚ್ಚು ಹಿಡಿದಹಾಗಾಗಿಹೋಯಿತು. ಅವಳ ಓಡಾಟವೇ ಓಡಾಟ. ಎಲ್ಲಾ ಅಂಗಡಿಗಳ ಹತ್ತಿರವೂ ನುಗ್ಗಿದಳು. ಅವಳ ಹಿಂದೆ ಓಡಿಹೋಗಿ ಅವಳನ್ನು ಹಿಡಿದು ನಿಲ್ಲಿಸುವ ವೇಳೆಗೆ ಅಪ್ಪನಿಗೆ ಸಾಕುಸಾಕಾಗಿಹೋಯಿತು. “ ನನಗೆ ಪಾಪ ಬೇಕೂ ” ಎಂದು ಲೀಲ ಹಠತೊಟ್ಟಳು.

“ ಬರುತ್ತೆ. ಆದರೆ ಈ ಅಂಗಡೀಲಿ ಬೊಂಬೆ ಮಾರೊಲ್ಲಾಮ್ಮ.

“ ಅದೇಕೆ ? ”

“ ಮೊದಲು ತರಕಾರಿಯ ಕಡೆ ಹೋಗೋಣ ” ಎಂದಳು ಅಮ್ಮ. ಲೀಲ ಮೊಂಡುಹಿಡಿದಳು. ದರದರನೆ ಅವಳನ್ನು ಎಳೆದುಕೊಂಡು ಹೋಗಬೇಕಾಯಿತು. “ ನನಗೆ ಪಾಪ ಬೇಕೂ.... ...” ಎಂದು ಅವಳು ಗೋಳಾಡಿದ್ದೂ ಗೋಳಾಡಿದ್ದೇ.

ಸೂಟ್ ಕೇಸುಗಳನ್ನು ಪೇರಿಸಿದ್ದ ಒಂದು ಅಂಗಡಿಯ ಕಡೆ ಅಪ್ಪನ ದೃಷ್ಟಿ ಸುಳಿಯಿತು. “ ನನ್ನ ಹಳೆಯ ಸೂಟ್‌ಕೇಸು ಚಿಂದಿಚಿಂದಿ ಎದ್ದು ಹೋಗಿದೆ ” ಎಂಬುದಾಗಿ ಗೊಣಗುಟ್ಟಿಕೊಂಡು ಅಪ್ಪ ಆ ಅಂಗಡಿಗೆ ನುಗ್ಗಿದರು. ಸ್ವಲ್ಪ ಹೊತ್ತಿನ ವೇಳೆಗೆ ಅವರು ಸೂಟ್‌ಕೇಸುಗಳ ಜಗತ್ತಿನಲ್ಲಿ ತಲ್ಲೀನರಾಗಿಹೋಗಿ, ತಮ್ಮ ಬೇರೆಯ ಹೊಣೆಗಾರಿಕೆಗಳನ್ನೆಲ್ಲ ಮರೆತುಹೋದರು. ಡಜನ್‌ಗಟ್ಟಲೆ ಸೂಟ್‌ಕೇಸುಗಳನ್ನು ತೆಗೆಸಿ ತೆಗೆಸಿ ನೋಡಿ, ಅಂಗಡಿಯವನೊಡನೆ ಚೌಕಾಸಿ ಮಾಡುವುದಕ್ಕೆ ತೊಡಗಿದರು. ಅಮ್ಮನಿಗೆ

ಕೂಡ ತಾಳ್ಮೆ ಮೀರಿತು. ಅಪ್ಪ ಹೇಳಿದರು. " ಒಂದು ನಿಮಿಷದಲ್ಲಿ ಬಂದು ಬಿಡ್ತೇನೆ. ನೀವು ತರಕಾರಿ ಕೊಂಡುಕೊಳ್ತಾ ಇರಿ" ಎಂದು. ಅಮ್ಮ ಮುಖ ಸೊಟ್ಟಗೆ ಮಾಡಿಕೊಂಡು ಹೊರಟಳು. ಲೀಲಳು ಒಬ್ಬಂಟಿಯಾದಳು. ಅಪ್ಪನೋ ಸೂಟುಕೇಸುಗಳಲ್ಲಿ ಮುಳುಗಿಹೋಗಿದ್ದಾರೆ ಅಮ್ಮ ಹೊರಟುಹೋಗುತ್ತಿದ್ದಾಳೆ. ತನಗಿನ್ನೇನುಗತಿ? " ಅಪ್ಪ........ಅಪ್ಪಾ...."
" ಶ್ ಶ್——ಶ್........"

" ನನಗೊಂದು ಬೊಂಬೆ ತೆಕ್ಕೊಡಿ ಅಪ್ಪ, ಅಪ್ಪ, ಅಪ್ಪ, ಅಪ್ಪ" ನಿಂತಿದ್ದರೆ ಸುಖವಿಲ್ಲವೆಂದು ಕಂಡುಕೊಂಡು ದೂರದಲ್ಲಿದ್ದ ಒಂದು ಬೊಂಬೆಯ ಅಂಗಡಿಯ ಕಡೆ ಓಡಿದಳು. ಅಲ್ಲೊಂದು ದೊಡ್ಡ ಸೆಲ್ಯೂಲಾಯಿಡ್ ಗೊಂಬೆ ಕೂತಿತ್ತು.

" ಏನಮ್ಮಾ, ನಿನಗೆ ಈ ಬೊಂಬೆ ಬೇಕಾ‌ಮ್ಮ?" ಎಂದು ಕೇಳಿದ ಅಂಗಡಿಯವನು.

" ನನಗೆ ಈ ಪಾಪ ಬೇಡ; ಕಣ್ಣುಮುಚ್ಚಿ ತೆಗೆದು ಮಾಡುತ್ತಲ್ಲ, ಅಂಥ ಬೊಂಬೆ ಬೇಕು. ಮುದ್ದಾದ ಲಂಗ, ಕುಲಾವಿ ಹಾಕಿರಬೇಕು." ಅಂಗಡಿಯವನು ಅವಳನ್ನು ಒಳಗೆ ಕರೆದುಕೊಂಡುಹೋದ. ಲೀಲ ಒಂದು ಕೆಂಪು ಚೆಂಡನ್ನು ಆರಿಸಿಕೊಂಡಳು. " ಬೊಂಬೆಯ ಜೊತೆಗೆ ನನಗೆ ಇದೂ ಬೇಕು........" ಎಂದಳು. ಅಂಗಡಿಯವನು ಕೆಂಪು ಲಂಗ, ಲೇಸ್ ಅಂಚಿನ ನೀಲಿಯ ಟೋಪಿ, ಬಿಳಿಯ ಬೂಡ್ಸು ಹಾಕಿದಂಥ ಗೊಂಬೆಯೊಂದನ್ನು ಎತ್ತಿಕೊಟ್ಟ. ಮಲಗಿಸಿದರೆ ಅದು ಕಣ್ಣು ಮುಚ್ಚಿಕೊಳ್ಳುತ್ತಿತ್ತು. ನಿಲ್ಲಿಸಿದರೆ ಕಣ್ಣು ಬಿಚ್ಚುತ್ತಿತ್ತು.

" ನನಗೆ ಈ ಚಂಡು ಬೇಡ, ಆ ಬೊಂಬೆ ಬೇಕು." ಲೀಲ ಆ ಬೊಂಬೆಯನ್ನು ಬಾಚಿಕೊಂಡು ಅಪ್ಪನಿದ್ದ ಕಡೆಗೆ ಓಡಿದಳು.

" ಎಷ್ಟು ಇದರ ಖರೀದಿ ? "

ಅಂಗಡಿಯ ಹುಡುಗ ಲೀಲಳ ಹಿಂದೆಯೇ ಬಂದಿದ್ದ, " ಐದು ರೂಪಾಯಿ ನಾಲ್ಕಾಣೆ ಸಾರ್."

" ಓಹೋ, ತುಂಬ ಬೆಲೆ, ತುಂಬ ಬೆಲೆ, ಎಂಥಾ ಬೊಂಬೆ ಅದು ? "

" ಡ್ರೆಸ್ ಮಾಡಿರೋಂಥಾದ್ದು ಸಾರ್. ಒಡೆದುಹೋಗದ ಬೊಂಬೆ, ಅನ್‌ಬ್ರೇಕಬಲ್ ಸಾರ್. ಆಥರದ್ದರಲ್ಲಿ ಚೀಪೆಸ್ಟು ಸಾರ್ ; ಇದೇ ಕಮ್ಮಿ ಖರೀದೀದು."

" ಬೇರೆ ಯಾವುದಾದರೂ ಬೊಂಬೆ ತೊಗೋಮ್ಮ, ಲೀಲ."

" ಉಹೂ, ನನಗೆ ಇದೇಬೇಕು. ಬೇರೆ ಯಾವುದೂ ಬೇಡ, ಎಷ್ಟು ಮುದ್ದಾಗಿದೆ, ಇದು ! ಅಪ್ಪ, ನೋಡಪ್ಪ ಇವಳು ನಿನ್ನ ಕಡೆಯೇ ನೋಡ್ತಾ ಇದ್ದಾಳೆ. ಅವಳು ಹೇಳ್ತಾಳೆ, ಅಂಗಡೀನ ಕಂಡರೆ ಅವಳಿಗೆ ಆಗೊಲ್ಲವಂತೆ. ಅಲ್ಲಿಗೆ ತಿರುಗಿ ಹೋಗೊಲ್ಲವಂತೆ.''

ಅಮ್ಮ ಬಂದಳು. ತರಕಾರಿ ತುಂಬಿದ ಗೂಡೆಯನ್ನು ಹೊತ್ತು ಕೊಂಡು ಕೂಲಿಯಾಳೊಬ್ಬನು ಹಿಂದೆಯೇ ಬಂದ. ಅಪ್ಪನು ಇನ್ನೂ ವ್ಯಾಪಾರದಲ್ಲೇ ಇದ್ದುದನ್ನು ಕಂಡು, ಜುಗುಪ್ಸೆಯಿಂದ " ಸೂಟ್‌ಕೇಸನ್ನೆಲ್ಲ ಪೂರಯಿಸಿದ ಮೇಲೆ ಕಾರ್ ಹತ್ತಿರ ಬನ್ನಿ. ಮರೀಬೇಡಿ. ಬಾರೆ ಲೀಲಾ ........'' ಎಂದು ಹೊರಟುಹೋದಳು.

ಲೀಲ ಅಮ್ಮನ ಹಿಂದೆಯೇ ಹೋದಳು. ಬಾಯಿತುಂಬ ಬೊಂಬೆಯ ಮಾತೇ. " ಅಮ್ಮ, ಇವಳ ಹೆಸರು ಗೊತ್ತೇನಮ್ಮ ನಿನಗೆ? ''

" ಅವಳಿಗೆ ಹೆಸರು ಬೇರೆ ಇಟ್ಟಿದ್ದೀಯೇನು ? ''

" ಹೂಮ್ಮಾ, ಅವಳ ಹೆಸರು ಡೋಚಿ ಅಂತ "

" ಅದು ಹೇಗೆ ಗೊತ್ತು ನಿನಗೆ ? ''

" ನನ್ನ ಕಿವೀಲಿ ಹೇಳಿದಳು."

" ಡೋಚಿ ಎಂದರೆ ಏನರ್ಥ ? ''

" ನಂಗೊತ್ತಿಲ್ಲಾಮ್ಮ. ಅವಳು ಪರಂಗಿಯವಳಮ್ಮ.''

ಕಾರಿನ ಬಳಿ ಬಂದಾಗ ಲೀಲ ಅಮ್ಮನಿಗೆ ಹೇಳಿದಳು, " ಮನೆಗೆ ಹೋದಮೇಲೆ ಇವಳಿಗೆ ಬುಡಕಸ್ಸಿ ಮಾಡಿಸ್ತೀನಿ.''

" ಉ ಹು ಹು ಹು ಹು. ಹಾಗೆಲ್ಲ ಮಾಡಕೂಡದು. ಬೊಂಬೆ ಹಾಳಾಗಿ ಹೋಗುತ್ತೆ. ಸ್ನಾನಗೀನ ಕೂಡದು."

" ಇಲ್ಲಾಮ್ಮ....ಸ್ನಾನ ಅಂದರೆ ನಿಜವಾದ ಸ್ನಾನ ಅಲ್ಲಾಮ್ಮ. ಇಲ್ಲಿ

ನೋಡು....ಹೀಗೆ....ಈಗ ಮಾಡಿಸ್ತೀನಿ ನೋಡು...." ಎಂದು ಲೀಲ ಗೊಂಬೆಯನ್ನು ಮೋಟರಿನ ಬಾಗಿಲ ಹಿಡಿಯ ಕೆಳಗೆ ಹಿಡಿದು ಹಿಡಿಯ ಕೀಲನ್ನು ಒತ್ತಿದಳು.

"ಈಗ ಸ್ನಾನ ಆಯಿತು. ನಿದ್ದೆ ಬರ್‍ತಾ ಇದೆಯಂತೆ ಅವಳಿಗೆ. ಅಮ್ಮ, ಡೋಚಿಗೆ ಒಂದು ಚಿಕ್ಕ ಕುದುರೆಗಾಡಿ, ಒಂದು ತೊಟ್ಟಿಲು, ಒಂದು ಸೀರೆ ಎಲ್ಲ ತೆಕ್ಕೊಡ್ತೀಯೇನಮ್ಮ?"

ಒಬ್ಬ ಕೂಲಿಯ ತಲೆಯ ಮೇಲೆ ನಾಲ್ಕು ಸೂಟ್ ಕೇಸ್‌ಗಳನ್ನು ಹೇರಿಸಿಕೊಂಡು ಅಪ್ಪ ಬಂದರು. "ಈ ನಾಲ್ಕರಲ್ಲಿ ಯಾವುದು ಕೊಂಡು ಕೊಳ್ಳೋಣ?" ಎಂದು ಕೇಳಿದರು.

"ನಾಲ್ಕೂ ಕೊಂಡುಕೊಳ್ಳೋಣವಾಗಬಹುದಲ್ಲ!"

"ಓಹೋ! ಮಾರ್ಕೆಟ್‌ನಲ್ಲಿರೋ ತರಕಾರೀನೆಲ್ಲ ತಾವೇ ಕೊಂಡು ಕೊಂಡು ಬಿಡೋಣವಾಯಿತೋ?" ಎಂದು ಅಪ್ಪ ವ್ಯಂಗ್ಯವಾಗಿ ಬದಲು ಹೇಳಿದರು.

"ಅಲ್ಲಿರೋದೆಲ್ಲ ನನಗೇನೆ ಅನ್ನೋಹಾಗೆ ಮಾತಾಡ್ತೀರಲ್ಲ. ಇದಕ್ಕೇ ನಿಮ್ಮ ಜತೇಲಿ ಬರಬಾರದು ಅನ್ನೋದು" ಅಮ್ಮನಿಗೆ ಕೋಪ ಬಂದಿತ್ತು. ಈ ಅಸಂಬದ್ಧ ಪ್ರಲಾಪವನ್ನು ಮುಂದುವರಿಸಿ ಫಲವಿಲ್ಲವೆಂಬುದನ್ನು ಅಪ್ಪ ಕಂಡುಕೊಂಡು, ಮರುಮಾತಾಡದೆ ಅಂಗಡಿಗೆ ಹಿಂದಿರುಗಿದರು. ಸ್ವಲ್ಪ ಹೊತ್ತಾದಮೇಲೆ ತಮ್ಮ ಆಯ್ಕೆಯ ಸೂಟ್ ಕೇಸನ್ನು ಹೆಮ್ಮೆಯಿಂದ ಹಿಡಿದುಕೊಂಡು ಬಂದರು. ಆದರೆ ಅದನ್ನು ಕಾರಿನೊಳಗಿಡಲು ಅವಕಾಶ ಕೊಡಲಿಲ್ಲ ಅಮ್ಮ. "ಬೇಕಾದರೆ ಕಾರ್ ಹಿಂದೆ ಕಟ್ಟಿಕೊಳ್ಳಿ. ಲಗೇಜ್ ರ್‍ಯಾಕ್ ಇರೋದೇಕೆ?" ಸಂತೋಷಪ್ರದರ್ಶಿಸಿ ಅಪ್ಪ ಆ ಅನುಜ್ಞೆಯನ್ನು ಶಿರಸಾವಹಿಸಿದರು. ಬಹಳ ಮೃದುವಾಗಿ, "ನಿನಗೇನೋ ಸಿಲ್ಕ್ ಬಟ್ಟೆ ಬೇಕೂ ಅಂತಿದ್ದೆ...." ಎಂದರು.

"ಇಲ್ಲದಿದ್ದರೂ ಪರವಾ ಇಲ್ಲ. ಇಷ್ಟು ದಿನ ಇದ್ದದ್ದೇ ಆಯಿತಂತೆ.... ಇನ್ನು ಹೋಗೋಣ ಬನ್ನಿ. ಒಂದು ಗಂಟೆ ಹೊತ್ತು ಈಗಾಗಲೆ ದಂಡ ವಾಯಿತು. ಥೂ ಹಾಳು ಭಿಕ್ಷದವರ ಗಲಾಟೆ."

"ಹೆದರಬೇಡಾಮ್ಮ ಡೋಚಿ ಭಿಕ್ಷದವರನ್ನೆಲ್ಲ ಓಡಿಸಿ ಬಿಡ್ತಾಳಮ್ಮಾ.'' ಎಂದಳು ಲೀಲಾ.

ಮೋಟಾರುಕಾರು ಜನರಲ್ ಆಸ್ಪತ್ರೆಯ ರಸ್ತೆಯಲ್ಲಿ ಹೋಗುತ್ತಿದಾಗ ಲೀಲ ಗೊಂಬೆಯನ್ನು ಕಾರಿನ ಕಿಟಕಿಯಿಂದ ಹೊರಗೆ ಹಿಡಿದು, ಎಲ್ಲವನ್ನೂ ಅದಕ್ಕೆ ವಿವರಿಸುತ್ತಿದ್ದಳು. "ನೋಡು ಮಗೂ, ಅದು ಟ್ರಾಮು........ಸುಳ್ಳು ಹೇಳ್ತಾ ಇಲ್ಲ ನಾನು. ಬೇಕಾದರೆ ಅಪ್ಪನ್ನ ಕೇಳಿ ನೋಡು, ಅದು ಟ್ರಾಮು ಹೌದೋ ಅಲ್ಲವೋ. ಅಪ್ಪ, ಒಂದು ದಿನ ನಮ್ಮನ್ನು ಟ್ರಾಮಿನಲ್ಲಿ ಕರಕೊಂಡು ಹೋಗ್ತೀರೇನಪ್ಪ? ಡೋಚೀಗೆ ಟ್ರಾಮಿನಲ್ಲಿ ಹೋಗಬೇಕೂ ಅಂತ ತುಂಬ ಆಸೆಯಂತೆ.''

"ಬೊಂಬೇನ ಹಾಗೆ ಹೊರಗೆ ಹಿಡೀ ಬೇಡಮ್ಮಾ ಕುಕ್ಕಿ ಗಿಕ್ಕಿ ಬಿಟ್ಟೀಯ." ಎಂದಳು ಅಮ್ಮ. "ಇದನ್ನ ಒಡೆದುಕೊಂಡೇ ಅಂದರೆ ಬೇರೆ ಯಾವುದೂ ತೆಗೆದುಕೊಡೊಲ್ಲ" ಎಂದು ಅಪ್ಪ ಸೇರಿಸಿದರು.

"ನಾನವಳನ್ನ ಮುರಿದುಹಾಕೊಲ್ಲಾಪ್ಪ. ಅವಳು ಟ್ರಾಂನ ನೋಡಬೇಕು ಅಂದಳು, ತೋರಿಸ್ತಾ ಇದ್ದೀನಿ ಅಷ್ಟೆ. ಬಲು ತಂಟೆ ಹುಡುಗಿ ಅವಳು. ಒಂದು ನಿಮಿಷಾನೂ ನನ್ನನ್ನ ಸುಮ್ಮನೆ ಬಿಡೊಲ್ಲ ಪ್ರಾಣ ಹಿಂಡಿ ಬಿಡ್ತಾಳೆ."

"ಊರು ಮಧ್ಯ ಹೋಗಿ ಆಮೇಲೆ ಬೀಚ್ ಕಡೆ ಹೋಗೋಣವೇನು?'' ಎಂದು ಅಪ್ಪ ಕೇಳಿದರು.

"ಹೂ" ಎಂದಳು ಅಮ್ಮ.

ಲೀಲ ಹೇಳಿದಳು. "ಬೀಚ್‌ಗೆ ಹೋಗೋದು ಬೇಡಾಪ್ಪ".

"ಯಾಕೆ ಬೇಡ?"

"ಅಲ್ಲಿ ತುಂಬ ಕತ್ತಲೆ, ಡೋಚಿ ಹೆದರಿಕೊಂಡುಬಿಡ್ತಾಳೆ.''

ಅಪ್ಪ ಚೈನಾ ಬಜಾರ್‌ನಲ್ಲಿ ಒಂದು ಅಂಗಡಿಯ ಮುಂದೆ ಸ್ವಲ್ಪ ನಿಂತರು. ಕಾರಿನ ಎದುರುಗಡೆಯಿದ್ದ ಅಂಗಡಿಯ ಮಹಡಿಯ ಮೇಲೆ ಬಣ್ಣಬಣ್ಣದ ಭಾರಿಯದೊಂದು ಸಿನಿಮಾ ಜಾಹೀರಾತು ಕಾಣಿಸುತ್ತಿತ್ತು. ಲೀಲ ತನ್ನ ಗೊಂಬೆಯನ್ನು ಹೊರಕ್ಕೆ ಹಿಡಿದು, "ಅಲ್ಲಿ ನೋಡು, ಅದು

ಸಿನಿಮಾ ಹೇಗಿದೆ? ಇಷ್ಟವಾ ನಿನಗೆ?" ಎಂದು ಕೇಳಿದಳು. ಕಾರು ಹೊರಟ ತಕ್ಷಣ ಬೊಂಬೆಯನ್ನು ಒಳಕ್ಕೆ ಎಳೆದುಕೊಂಡು "ಸಿನಿಮಾ ಆಗ್ಹೋಯ್ತು" ಎಂದಳು.

ಬೀಚ್ ಹತ್ತಿರದ ರೈಲ್ವೆ ಗೇಟಿನ ಹತ್ತಿರ ಕಾರನ್ನು ನಿಲ್ಲಿಸಬೇಕಾಗಿ ಬಂತು. ನಾಲ್ಕು ಎಲೆಕ್ಟ್ರಿಕ್ ರೈಲುಗಳು ಹಾದು ಹೋಗಬೇಕಾಗಿತ್ತು. ಆದ್ದರಿಂದ ಬಾಗಿಲನ್ನು ಬಹಳ ಹೊತ್ತು ಮುಚ್ಚಿದ್ದರು. ಅಣೆಕಟ್ಟಿನ ಹಿಂದೆ ನೀರು ನಿಂತಂತೆ ಹತ್ತಾರು ಬಂಡಿಗಳು ನೂರಾರು ಪಾದಚಾರಿಗಳು ಗೇಟಿನ ಇತ್ತಕಡೆ ನಿಂತಿದ್ದರು. ಲೀಲ ಡೋಚಿಯನ್ನು ಮೋಟರಿನಿಂದ ಹೊರಗಡೆ ಹಿಡಿದು, "ಎಷ್ಟು ಗೋಳು ಹುಯ್ಯಕೊಳ್ಳುತಾಳಪ್ಪ! ಎಲೆಕ್ಟ್ರಿಕ್ ರೈಲನ್ನು ನೋಡಬೇಕಂತೆ. ನೋಡು ನೋಡು ಡೋಚಿ, ನಿನ್ನ ಕೈಯನ್ನ ಚಾಚಿ ಕೊಂಡಿರಬೇಡ, ಬೀಳಿಸಿಬಿಟ್ಟೀಯ ಬೊಂಬೇನ! ಬೀಳಿಸಿಬಿಟ್ಟರೆ ಇನ್ನೊಂದು ತೆಗೆದುಕೊಡೊಲ್ಲ'' ಎಂದು ಎಚ್ಚರಿಕೆಯಿತ್ತಳು.

"ಏನ್ನ ಅವಳು ಹಿಡಕೊಂಡಿರೋದು?"

"ಅವಳಿಗೊಂದು ಪುಟ್ಟಬೊಂಬೆ ತೆಕ್ಕೊಟ್ಟೆ. ಅದನ್ನ ಕೈಲಿ ಹಿಡಿದು ಕೊಂಡು ಊರೆಲ್ಲ ತೋರಿಸಬೇಕೂ ಅಂತ ಹಟಹಿಡೀತಾಳೆ. ಎಷ್ಟು ಹೇಳಿದರೂ ಕೇಳೊಲ್ಲ. ಅದನ್ನ ಮುರಿದುಹಾಕಿದರೆ ನಾನಂತೂ ಇನ್ನೊಂದು ತೆಕ್ಕೊಡೊಲ್ಲ'' ಎಂದಳು ಲೀಲ.

ಬಾಗಿಲುಗಳು ತೆರೆದುವು. ಜನರ ಗುಂಪು ಮತ್ತೆ ಪ್ರವಹಿಸತೊಡಗಿತು. ಅಪ್ಪ ಬಹಳ ನಿಧಾನವಾಗಿ ಕಾರನ್ನು ನಡೆಸುತ್ತಿದ್ದರು. ಜನರ ಗುಂಪನ್ನು ನೋಡಬೇಕೆಂದು ಡೋಚಿ ಒತ್ತಾಯಮಾಡುತ್ತಿದ್ದಾಳೆಂದು ಹೇಳಿ ಲೀಲಳು ಗೊಂಬೆಯನ್ನು ಕಾರಿಂದ ಹೊರಗಡೆಯೇ ಹಿಡಿದುಕೊಂಡಿದ್ದು, ರೈಲ್ವೆ ಕಂಬಿ ದಾಟಬೇಕೆನ್ನುವಾಗ ಸರಿಯಾಗಿ ದೊಪ್ಪನೆ ಕೆಡವಿಬಿಟ್ಟಳು. "ಅಯ್ಯೋ, ಡೋಚಿ ಬಿದ್ದುಹೋದಳು" ಎಂದು ಕಿಟ್ಟನೆ ಕಿರಿಚಿದಳು. ಆದರೆ ಬಾಗಿಲನ್ನು ದಾಟಿ ಹಲವು ಗಜ ಕಳೆಯುವ ವರೆಗೆ ನಿಲ್ಲಿಸುವುದಕ್ಕಾಗಲಿಲ್ಲ ಕಾರನ್ನು. ಅಮ್ಮನ ಮುಖ ಕೆಂಡವಾಗಿತ್ತು. "ಆಗಲೇ ಹೇಳಲಿಲ್ಲ?....''

"ಇನ್ನೆಂದೆಂದಿಗೂ ನಿನಗೆ ಬೊಂಬೆಕೊಂಡು ಕೊಡೊಲ್ಲ" ಎಂದು ಅಪ್ಪ ಗರ್ಜಿಸಿದರು. ಕಾರನ್ನು ನಿಲ್ಲಿಸಿ ಅಪಘಾತ ನಡೆದ ಸ್ಥಳಕ್ಕೆ ನಡೆದು ಹೋದರು. ಲೀಲಾ ಬಹಳ ಕಾತರದಿಂದ ಬಣ್ಣಾ ನೋಡುತ್ತಿದ್ದಳು. ಅಪ್ಪ ಬಗ್ಗಿ ನೆಲದಿಂದ ಗೊಂಬೆಯ ಅವಶೇಷಗಳನ್ನು ಆರಿಸಿಕೊಂಡು ಬಂದರು.

"ಡೋಚಿಯೆಲ್ಲಿ?" ಎಂದು ಲೀಲ ಕೇಳಿದಳು. ಅಪ್ಪ, ಮಣ್ಣು ಮಡಕೆಯ ಚೂರುಗಳನ್ನೂ, ಮುದುರಿ ಮೂಟೆಕಟ್ಟಿದ ಕೆಂಪು ಲಂಗ ವನ್ನೂ ಕೊಚ್ಚೆ ಮೆತ್ತಿಕೊಂಡಿದ್ದ ಕುಲಾವಿಯನ್ನು ತೋರಿಸಿದರು.

"ಇದೇನೂ ನನ್ನ ಡೋಚಿ ಅಲ್ಲ. ಅವಳು ಅಲ್ಲೇ ಇರಬೇಕು." ಲೀಲ ತನ್ನ ಕಾಲುಗಳನ್ನು ಬಡಿಯುತ್ತ ಅಳ ತೊಡಗಿದಳು. ಆ ಪ್ರದೇಶಕೆ' ಅಪ್ಪ ಅವಳನ್ನೇ ಕರೆದುಕೊಂಡು ಹೋದರು.

"ಡೋಚಿಯೆಲ್ಲಿ?" ಎಂದಳು ಲೀಲ. ಅಲ್ಲಿ ಬಿದ್ದಿದ್ದ ಇನ್ನಷ್ಟು ಚೂರುಗಳನ್ನು ಕಂಡು "ಇಪ್ಪತ್ತು ಮೂವತ್ತು ಕಾರುಗಳಾದರೂ ಅವಳ ಮೇಲೆ ಹರಿದುಹೋಗಿರಬೇಕು" ಎಂದು ಹೇಳುತ್ತ ಅಪ್ಪ ಅವಳಿಗೆ ಲಂಗ ಕುಲಾವಿಗಳನ್ನು ಕೊಟ್ಟರು.

"ಇದು ಅವಳ ಬಟ್ಟೆ. ಅವಳೆಲ್ಲಿ?" ಎಂದು ಲೀಲ ಹಟಹಿಡಿ ದಳು. ಸುತ್ತಮುತ್ತ ಸಂಶಯದಿಂದ ಕಣ್ಣುಹೊರಳಿಸಿ "ಇಲ್ಲೇ ಎಲ್ಲಾದರೂ ಬಚ್ಚಿಟ್ಟುಕೊಂಡಿರಬಹುದು" ಎಂದಳು.

ಲೀಲ ಕಾರಿನ ಬಳಿ ಓಡಿಹೋಗಿ, ಅಮ್ಮನನ್ನು ಕೂಗಿ ಕರೆದು "ಅಮ್ಮಾ, ಡೋಚಿ ತಪ್ಪಿಸಿಕೊಂಡು ಹೊರಟುಹೋಗಿದ್ದಳಮ್ಮ; ಲಂಗ, ಕುಲಾವಿ ಮಾತ್ರ ಬಿಟುಬಿಟ್ಟು ಹೋಗಿದ್ದಾಳೆ. ನನಗೆ ಗೊತ್ತು ಅವಳ, ತುಂಬ ತುಂಟೆ ಅಂತ. ಆಚೆ ಎತ್ತಿಕೊಂಡು ಎಲ್ಲಾ ತೋರಿಸುತ್ತಾ ಇದ್ದಾಗ ನನ್ನ ಕೈಯನ್ನ ಕಚ್ಚೋದು, ಜಿಗಟೋದು ಎಲ್ಲ ಮಾಡುತ್ತಾ ಇದ್ದಳು........" ಎಂದು ತಿಳಿಸಿದಳು.

ಅಪ್ಪ ಕಾರಿನ ಬಳಿಗೆ ಹಿಂದಿರುಗಿ "ಸೂಟ್‌ಕೇಸೆಲ್ಲಿ?" ಎಂದು ಉದ್ಗಾರ ತೆಗೆದರು. ಅಮ್ಮ ಲೀಲ ಇಬ್ಬರೂ ಇಳಿದು ಕಾರಿನ ಹಿಂದೆ

ಹೋಗಿ ಲಗೇಜ್ ರ್‍ಯಾಕಿನ ಕಡೆ ನೋಡಿದರು. ಬರಿದಾಗಿತ್ತು. "ಹದಿನಾಲ್ಕು ರೂಪಾಯಿ ಚೊಕ್ಕಟವಾಯಿತು" ಎಂದು ಅಪ್ಪ ಗೋಳಿಟ್ಟರು. "ಹಿಂದುಗಡೇನೆ ಕಟ್ಟಬೇಕು ಎಂದು ನೀನು ಹಟಹಿಡೀದೆ ಹೋಗಿದ್ದರೆ ಅದು ಕಳೆದುಹೋಗುತ್ತಿರಲಿಲ್ಲ. ಬೆಲ್ಟೇ ಕಿತ್ತುಹೋಯಿತೋ ಅಥವಾ ರೈಲ್ವೇ ಗೇಟ್ ಹತ್ತಿರ ಯಾರಾದರೂ ಹಾರಿಸಿ ಬಿಟ್ಟರೋ ಅದೇಸವುಯಾ ಅಂತ?" ಅಪ್ಪನ ಫಜೀತಿ ನೋಡುವುದಕ್ಕಾಗುತ್ತಿರಲಿಲ್ಲ.

ಮತ್ತೆ ತಮ್ಮ ತಮ್ಮ ಜಾಗಗಳಿಗೆ ಹಿಂದಿರುಗಿದ ಮೇಲೆ ಲೀಲ ಹೇಳಿದಳು. "ಆ! ನನಗೆ ಗೊತ್ತಾಯಿತು. ಅಪ್ಪಾ, ಡೋಬಿ ಸೂಟ್‌ಕೇಸ್ನೂ ಎತ್ತಿಕೊಂಡು ಓಡಿಹೋಗಿರಬೇಕು. ಎಲ್ಲಿ ಹೋಗ್ತಾಳೆ? ಬರ್‍ತಾಳೆ ಯಾವತ್ತಾದರೂ........ಆದರೆ ಅವಳಿಗೆ ನಮ್ಮ ಮನೆಯ ದಾರಿ ಗೊತ್ತೇ?"

# ಗಾಂಧಿ

ಪದ್ಮಳಗಂಡ ಹೇಳಿದ. "ಆರು ಗಂಟೆಗೆ ವಾಪಸು ಬಂದುಬಿಡ್ತೀನಿ. ಆವೇಳೆಗೆ ನೀನು ಸಿದ್ಧವಾಗಿರು. ಇಬ್ಬರೂ ಬೀಚ್‌ಗೆ ಹೋಗೋಣವಂತೆ"

"ನಾನು ರಾಯಲ್ ಥಿಯೇಟರಿಗೆ ಹೋಗ್ತೀನಿ ಈವತ್ತು ಸಾಯಂಕಾಲ. ಅಲ್ಲಿ ಗಾಂಧಿ ಮಾತಾಡ್ತಾರಂತೆ."

"ಓಹೋ. ಆದರೆ ಒಂದು ಮಾತು. ಅಲ್ಲಿಗೆ ಹೋಗೋ ಮುಂಚೆ ಒಡವೆಗಳನ್ನೆಲ್ಲ ತೆಗೆದು ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿಕೊಂಡು ಹೋಗು' ಹುಷಾರ್" ಎಂದು ಗಂಡ ಹೇಳಿದ.

"ನೀವು ಅಲ್ಲಿಗೆ ಹೋಗೋದಾದರೆ ಪರ್ಸ್ ತೆಗೆದು ನಿಮ್ಮ ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟು ಬೀಗಹಾಕಿಕೊಂಡು ಹೋಗಿ" ಎಂದು ಪದ್ಮ ಎದುರು ಜವಾಬು ಹೇಳಿದಳು.

"ನಾನೇನೂ ಅಲ್ಲಿಗೆ ಹೋಗೊಲ್ಲ" ಎಂದು ಹೇಳಿ ಆಫೀಸಿಗೆ ಹೊರಟು ಹೋದ.

ಮಧ್ಯಾಹ್ನ ಮೂರು ಗಂಟೆಯವೇಳೆಗೆ ಪದ್ಮ ಕನ್ನಡಿಯ ಮುಂದೆ ನಿಂತು ಒಂದೊಂದಾಗಿ ಎಲ್ಲ ಒಡವೆಗಳನ್ನು ಬಿಚ್ಚತೊಡಗಿದಳು. ಅರ್ಧ ಗಂಟೆಯವೇಳೆಗೆ ಮುಖ, ಕೈಯಿ, ಎಲ್ಲ ಬರಿದಾಗಿಬಿಟ್ಟಿತ್ತು. ಕನ್ನಡಿಯಲ್ಲಿ ಒಂದುಸಲ ಪರೀಕ್ಷಿಸಿಕೊಂಡಳು. ಮನಸ್ಸು ಸ್ವಲ್ಪ ಖಿನ್ನವಾಯಿತು ಅವಳಿಗೆ ಪಕ್ಕದ ಮನೆಯ ಲಾಯರ್ ಹೆಂಡತಿಯೂ ಮಿಾಟಿಂಗಿಗೆ ಬಂದಿರುತ್ತಾಳೆ. ಅವಳ ಮುಂದೆ ತನ್ನ ಹೊಸ ಬಂಗಾರದ ಸರವನ್ನು ತೋರಿಸಿಕೊಳ್ಳುವ ಹಾಗಿಲ್ಲವಲ್ಲಾ ಎಂಥ ಅವಕಾಶ ಹೋಯಿತು!

ಸಭೆಯಲ್ಲಿ ಕಳೆದುಕೊಳ್ಳುವಂಥ ಒಡವೆ ಯಾವುದೂ ಇಲ್ಲವಲ್ಲ ಸಧ್ಯ, ಎಂದು ಅವಳಿಗೆ ಸಮಾಧಾನವಾಯಿತು. ಬಳೆ ಕೂಡ ತೆಗೆದುಬಿಟ್ಟಿದ್ದಳು. ತಕ್ಷಣ ಅವಳಿಗೆ ಜ್ಞಾಪಕ ಬಂತು. ಶುಕ್ರವಾರದಂಥ ಮಂಗಳ

ದಿವಸದಲ್ಲಿ ಬಳೆಯಿಲ್ಲದೆ ಬರಿಕೈಯಲ್ಲಿ ಮನೆಬಿಟ್ಟು ಕದಲುವುದು ಮುತ್ತೈದೆಯಾದವಳಿಗೆ ಶ್ರೇಯಸ್ಸಲ್ಲ ಎಂದು. ಎಲ್ಲಕ್ಕಿಂತ ತೆಳ್ಳಗಿದ್ದ ಎರಡು ಬಳೆ ಆರಿಸಿ ತೊಟ್ಟುಕೊಂಡಳು. ಸೀರೆಯ ಸೆರಗಿಂದ ಅವುಗಳನ್ನು ಭದ್ರವಾಗಿ ಮುಚ್ಚಿಟ್ಟುಕೊಳ್ಳುತ್ತೇನೆಂದು ಮನಸ್ಸು ಮಾಡಿಕೊಂಡಳು.

ಸಭೆ ಐದು ಗಂಟೆಗೆ ಮೊದಲಾಗಬೇಕಾಗಿತ್ತು. ಆದರೆ ಪದ್ಮ ನಾಲ್ಕು ಗಂಟೆಗೇ ರಾಯಲ್ ಥಿಯೇಟರಿನಲ್ಲಿದ್ದಳು. ಆದುದರಿಂದ ಮುಂದಿನ ಸಾಲಿನಲ್ಲಿ ಒಂದು ಕುರ್ಚಿ ದಕ್ಕಿತು. ಪಕ್ಕದ ಕುರ್ಚಿಯಲ್ಲಿ ಅವಳ ಸ್ನೇಹಿತಿಯೇ ಆದವಳೊಬ್ಬಳು ಕೂತಿದ್ದಳು. ಅವಳ ಕೈಯಿ, ಕಿವಿ, ಮೂಗೂ ಕೂಡ ಬರಿದಾಗಿದ್ದುವು. "ಇದೇನಿದು ಸಮಾಚಾರ? ಬಳೆ, ಓಲೆ, ಮೂಗುಬೊಟ್ಟು ಎಲ್ಲ ಎಲ್ಲಿ?" ಎಂದು ಪದ್ಮ ಕೇಳಿದಳು. ಸ್ನೇಹಿತಿ ಹೇಳಿದಳು: "ಬೇಕೂ ಅಂತಲೇ ತೆಗೆದು ಮನೇಲಿಟ್ಟುಬಿಟ್ಟು ಬಂದೆ. ಗಾಂಧೀ ಮಹಾತ್ಮರು ನಾಕು ವರ್ಷದ ಕೆಳಗೆ ಇಲ್ಲಿಗೆ ಬಂದಿದ್ದರು. ಇದೇ ಹಾಲಿನಲ್ಲೇ ಮೀಟಿಂಗ್ ನಡೀತು. ಆಗ ನಾನೂ ಬಂದಿದ್ದೆ. ಅವರು ಭಾಷಣಮಾಡಿ, ಹಣಕೊಡಿ ಎಂದ ಕೈಯೊಡ್ಡಿದರು. ನನಗೇ ಗೊತ್ತಿಲ್ಲ, ಏನುಮಾಡಿದೆ ಅನ್ನೋದು. ಅಷ್ಟರಲ್ಲಿ ನನ್ನ ಎಂಟುಬಳೆ, ಅವತ್ತು ಸವರ್ನ ಬಾಳೋ ನನ್ನ ಚಿನ್ನದ ಸರ ಎಲ್ಲ ತೆಗೆದು ಅವರ ಪಾದದ ಬಳಿ ಇಟ್ಟುಬಿಟ್ಟೆ. ಆ ಗಾಂಧೀ ಮಹಾತ್ಮರ ಮಾಯೆ ಏನೂ ಅಂತೀ? ಅರ್ಧ ಗಂಟೇಲಿ ಒಡವೆಯ ರೂಪದಲ್ಲೇ ಮೂರುಸಾವಿರ ರೂಪಾಯಿ ಸುರಿದುಹೋದುವು. ಅದೇನು ಶಕ್ತಿಯೋ ಏನೋ, ಆತ ಕೇಳಿದರೆ ಯಾರೂ ಇಲ್ಲ ಎನ್ನುವುದೇ ಇಲ್ಲ. ನಾನು ಮನೆಗೆ ಬರಿಗೈಯಲ್ಲಿ ಹೋದುದನ್ನು ನೋಡಿ ನಮ್ಮ ಮನೆಯವರು ಮೂರು ತಿಂಗಳ ಕಾಲ ನನ್ನ ಕೈಯಲ್ಲಿ ಮಾತು ಬಿಟ್ಟುಬಿಟ್ಟರು. ಈವತ್ತಂತೂ, ನನ್ನ ಒಡವೇನೆಲ್ಲ ಕಳಚಿಟ್ಟ ಹೊರತು ಹೊರಕ್ಕೆ ಬಿಡಲಿಲ್ಲ ಅವರು."

ಬಿಳಿಯ ಖಾದೀ ಬಟ್ಟೆಯನ್ನು ತೊಟ್ಟಿದ್ದ ಸ್ವಯಂಸೇವಕರ ಸಂಭ್ರಮವೇ ಸಂಭ್ರಮ. ಕುರ್ಚಿಗಳನ್ನು ಇಲ್ಲಿಂದಲ್ಲಿಗೆ ನೂಕುವುದೇನು,

ವೇದಿಕೆಯ ಮೇಲೆ ಹೂವಿನ ಕುಂಡಗಳನ್ನು ಜೋಡಿಸುವುದೇನು, ಸೇರಿದ್ದ ಸಂದಣಿಯಲ್ಲಿ ಸದ್ದಡಗಿಸುವುದೇನು! ನಾಲ್ಕುಹೊಡೆದು ಹದಿನೈದು ನಿಮಿಷವಾಗಿಲ್ಲ. ಆಗಲೇ ಮಂದಿರವೆಲ್ಲ ತುಂಬಿಹೋಗಿತ್ತು. ಕಿಟಕಿಗಳು ಬಾಗಿಲುಗಳು, ಎಲ್ಲಿ ನೋಡಲಿ, ಮನುಷ್ಯರ ತಲೆಗಳೇ. ಉಸಿರಾಡುವುದಕ್ಕೂ ಸ್ಥಳವಿರಬಾರದು. ಹಾಗಿತ್ತು ಗುಂಪು.

ಐದು ಹೊಡೆಯುವ ವೇಳೆಗೆ ಸರಿಯಾಗಿ ಮಹಾತ್ಮಾ ಗಾಂಧಿ ಬಂದರು. ಎಲ್ಲರೂ ಎದ್ದುನಿಂತರು. ಸಭೆಯ ತುಂಬ "ಗಾಂಧೀಕಿ ಜೈ, ಭಾರತ ಮಾತಾಕೀ ಜೈ" ಎಂಬ ಕೂಗುಗಳು. ಗಾಂಧಿ ವೇದಿಕೆಯ ಮೇಲೆ ನಿಂತು ಜನರ ಕಡೆ ನೋಡಿ ತೃಪ್ತಿಯಾದ ಕಿರುನಗುವನ್ನು ಸೂಸಿ, ತಲೆಬಾಗಿ ಜನರಿಗೆ ನಮಸ್ಕರಿಸಿದರು. ಪದ್ಮ ಕೈಜೋಡಿಸಿಕೊಂಡು ನಿಂತಿದ್ದಳು. ಇವರೇನೇ ಗಾಂಧೀ ಮಹಾತ್ಮರು? ನಾಲ್ಕೈದು ಸಲ ಕೈಮುಗಿದು ಕೂತುಕೊಂಡಳು. ಸಭಾ ಮಂದಿರದ ಮೂಲೆ ಮೂಲೆಯಿಂದಲೂ ಮಹಾತ್ಮರ ಮೇಲೆ ಜನ ಹಾರಗಳನ್ನೂ ಹೂವುಗಳನ್ನೂ ಎಸೆದರು. ಅನೇಕ ಹೆಂಗಸರು ಓಡೋಡಿ ಬಂದು ವೇದಿಕೆಯನ್ನು ಹತ್ತಿ ಗಾಂಧೀಜಿಯ ಪಾದಗಳನ್ನು ಕಣ್ಣಿಗೊತ್ತಿಕೊಂಡರು. ಗದ್ದಲ ಅಡಗುವುದಕ್ಕೆ ಅರ್ಧ ಗಂಟೆ ಹಿಡಿಯಿತು. ಗಾಂಧೀಜಿ ವೇದಿಕೆಯ ಮೇಲೆ ಕುಳಿತುಕೊಂಡರು. ಅವರ ಸುತ್ತುಮುತ್ತಲೇ ಅಡ್ಡಾಡುತ್ತಿದ್ದ ಜೋಲುಮೀಸೆಯ ಇಳಿವಯಸ್ಸಿನವರೊಬ್ಬರು ಕಾಗದದ ಸುರುಳಿಯನ್ನು ಕೈಲಿ ಹಿಡಿದುಕೊಂಡು ಮುಂದೆ ಬಂದು ಮಾನಪತ್ರವನ್ನು ಓದಿದರು. ಮಹಾತ್ಮರನ್ನು ಸ್ವಾಗತಿಸುವುದರ ಜತೆಗೆ ಸ್ಥಳೀಯ ಅಸ್ಪೃಶ್ಯ ಸೇವಕ ಸಂಘದ ಚಟುವಟಿಕೆಗಳ ವರದಿಯನ್ನು ಒಪ್ಪಿಸಿದರು.

ಮಾನಪತ್ರ ಸಮರ್ಪಣೆಯಾದ ಮೇಲೆ ಗಾಂಧಿ ಮಾತನಾಡಿದರು. ಅವರ ದನಿಯಲ್ಲಿ ಏನೋ ಒಂದು ಬಗೆಯ ಶಾಂತವಾದ ಇಂಪಾದ ತಾನವಿತ್ತು. ಶ್ರಾವಕರ ಮನಸ್ಸನ್ನೆಲ್ಲ ಅದು ಆಕರ್ಷಿಸುತ್ತಿತ್ತು. ಅದನ್ನು ಕೇಳಿದವರು ಅದರಂತೆ ನಡೆಯದಿರಲು ಸಾಧ್ಯವೇ ಇರುತ್ತಿರಲಿಲ್ಲ. "ನಾನು

ಸುಧಾರಣೆಯ ಯಾತ್ರೆಗಾಗಿ ಬಂದಿದ್ದೇನೆಂಬುದು ನಿಮಗೆ ಗೊತ್ತೇ ಇದೆ. ಯಾವುದನ್ನು ನಾನು ಸತ್ಯವೆಂದು ಕಂಡುಕೊಂಡಿದ್ದೇನೋ ಅದರ ಸಲುವಾಗಿ ಬಂದಿದ್ದೇನೆ. ಈ ಕಾರ್ಯದಲ್ಲಿ ನೀವು ನೆರವಾಗಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಗಾಂಧಿ ನುಡಿದರು. ದೇವರ ದೃಷ್ಟಿಯಲ್ಲಿ ಎಲ್ಲ ಮನುಷ್ಯರೂ ಸಮಾನರು. ತಲೆ, ಕೈಯ್ಯಿ, ಕಾಲುಗಳಿಗಿಂತ ಕಿವಿ, ಮೂಗುಗಳು ಹೆಚ್ಚು ಮುಖ್ಯವೆಂದು ಯಾರಾದರೂ ಹೇಳುವುದಕ್ಕೆ ಸಾಧ್ಯವೇ? ಪ್ರತಿಯೊಂದೂ ಮುಖ್ಯ. ಅದೇ ರೀತಿ ಸಮಾಜದ ಪ್ರತಿಯೊಂದು ವರ್ಗವೂ ಮಿಕ್ಕೆಲ್ಲ ವರ್ಗಗಳಷ್ಟೇ ಪ್ರಧಾನವಾದುದು. ವರ್ಣಾಶ್ರಮ ಭೇದವೆನ್ನುವುದು ಕೇವಲ ಆರ್ಥಿಕವಾದುದು. ಕಾರ್ಯ ಸುಗಮವಾಗಿ ನಡೆಯಬೇಕೆಂಬ ಅನುಕೂಲಕ್ಕಾಗಿ ಏರ್ಪಡಿಸಿದ್ದ ಪದ್ಧತಿಯದು. ತುಟ್ಟತುದಿಯಲ್ಲಿದ್ದ ಬ್ರಾಹ್ಮಣನು ವೈದೀಕ ಕಾರ್ಯಗಳನ್ನೂ ಆಧ್ಯಾತ್ಮಕ ಕಾರ್ಯಗಳನ್ನೂ ಮಾಡುತ್ತಿದ್ದರೆ, ಪಂಚಮನೆನಿಸಿದ ಹರಿಜನನಾದರೋ, ಅಷ್ಟೇ ಅಗತ್ಯವಾದ ನಗರ ನೈರ್ಮಲ್ಯ ಮುಂತಾದ ದೈಹಿಕ ಕಾರ್ಯಗಳಲ್ಲಿ ಪ್ರವೃತ್ತನಾಗಿರುತ್ತಿದ್ದನು. ಅದಷ್ಟು ಮಾತ್ರದಿಂದ ಪಂಚಮರನ್ನು ಕುಷ್ಠರೋಗಿಗಳಂತೆ ಕಾಣುವುದು ತರವೆ? ದೇವರ ಕಣ್ಣಿನಲ್ಲಿ ಎಲ್ಲರೂ ಸಮಾನರಲ್ಲವೆ?

ಈ ರೀತಿ ಗಾಂಧೀಜಿ ಸುಮಾರು ನಲವತ್ತು ನಿಮಿಷ ಮಾತಾಡಿರಬಹುದು. ಸೇರಿದ್ದ ಜನ ಯಕ್ಷಿಣಿಗೊಳಗಾದಂತೆ ಮೂಕಬಡಿದು ಕೇಳುತ್ತಿದ್ದರು. ಗಾಂಧೀಜಿಯ ಶಿರಸ್ಸಿನ ಹಿಂದೆ ಪ್ರಭಾವಳಿಯಂತೆ ಹೊಳೆಯುವ ಜ್ಯೋತಿಯೊಂದು ಪದ್ಮಳಿಗೆ ಕಾಣಿಸಿತು. ಅವರು ಹೇಳಿದ ಪ್ರತಿಮಾತೂ ಆಕೆಗೆ ಒಪ್ಪಿಗೆಯಾಯಿತು. ತಮ್ಮ ಮನೆಗೆ ಬರುತ್ತಿದ್ದ ಜಲಗಾರನ ಬಗ್ಗೆ ಅವಳಿಗೆ ವಿಶೇಷವಾದ ಮರುಕಹುಟ್ಟಿತು. ನಿಷ್ಕಾರಣವಾಗಿ ಅವನನ್ನು ನಿಂದಿಸಿ, ಬೈದು ಗೋಳುಹುಯ್ದುಕೊಳ್ಳುವೆನಲ್ಲಾ ಎಂದು ಪೇಚಾಡಿಕೊಂಡಳು.

ಭಾಷಣವಾದಮೇಲೆ ಗಾಂಧಿ ವ್ಯವಹಾರಕ್ಕೆ ತೊಡಗಿದರು. ತಾವು ಬಂದಿರುವುದು ಹಣಕ್ಕೆ ಎಂದು ಸಭಿಕರೆಲ್ಲ ಈ ವೇಳೆಗೆ ಅರಿತುಕೊಂಡೇ ಇರ

ಬೇಕೆಂದು ಹೇಳಿದರು. ಹಣ ಬೇಕಾದುದಾದರೂ ದಲಿತ ಜನರಿಗೆ ಜೀವನದ ಅತ್ಯಗತ್ಯವಾದ ಸಾಮಗ್ರಿಗಳನ್ನು ಒದಗಿಸುವುದಕ್ಕಾಗಿ. ಹೆಂಗಸರ ಕಡೆ ನೋಡಿ, "ನಿಮ್ಮ ಒಡವೆಗಳೆಲ್ಲ ಈ ಕೆಲಸಕ್ಕೆ ಒದಗಬೇಕು" ಎಂದರು. ಸಭೆಯಲ್ಲಿದ್ದ ಹೆಂಗಸರ ಗುಂಪಿನಲ್ಲಿ ಗುಸಗುಸ ಹಬ್ಬಿತು. ಇದನ್ನು ಕಂಡು ಗಾಂಧೀಜಿ ಸಣ್ಣದಾಗಿ "ನಾನು ಬನಿಯಾ ಜಾತಿಯವನು. ಲೇವಾದೇವಿ ನಮ್ಮ ಕಸಬು. ನಿಮ್ಮ ಹತ್ತಿರವಿರುವ ಹಣವೆಲ್ಲಾ, ಅಷ್ಟೇ ಅಲ್ಲ, ಹಣಕ್ಕೆ ಪರಿವರ್ತಿಸಬಹುದಾದ ವಸ್ತುಗಳೆಲ್ಲಾ ನನ್ನ ಜೇಬಿಗೆ ಬೀಳುವವರೆಗೆ ನಾನು ಕದಲುವವನಲ್ಲ. ಎಚ್ಚರ, ಜಾಗ್ರತೆ ಮಾಡಿ. ಈ ಸಂಜೆ ನಾನು ಇನ್ನೂ ಒಂದು ಸಭೆಗೆ ಹೋಗಬೇಕಾಗಿದೆ.'' ಎಂದರು.

ಯಾರೋ ಒಬ್ಬರು ಗುಂಪಿನಲ್ಲಿ ದಾರಿಮಾಡಿಕೊಂಡು ನುಗ್ಗಿ ಬಂದು ಗಾಂಧೀಜಿಯ ಕೈಯಲ್ಲಿ ಒಂದು ಬೆಳ್ಳಿಯ ತಟ್ಟೆಯನ್ನಿಟ್ಟರು. ಮಹಿಳೆಯೊಬ್ಬಳು ವೇದಿಕೆಯ ಮೇಲೆ ಪುಟಕ್ಕನೆ ನೆಗೆದು ಬಂದು, ತನ್ನ ಅಡ್ಡಿಕೆಯನ್ನು ತೆಗೆದುಕೊಟ್ಟಳು. ಅಡ್ಡಿಕೆಯನ್ನು ಕೊಟ್ಟುದಕ್ಕಾಗಿ ಅವಳನ್ನು ವಂದಿಸಿ, ಗಾಂಧೀಜಿ ಕೇಳಿದರು "ನಿನ್ನ ಬೆರಳಿನಲ್ಲಿ ಕಾಣಿಸುತ್ತದಲ್ಲ, ಆ ಉಂಗುರವನ್ನು ಇಟ್ಟುಕೊಂಡಿರಬೇಕೆಂದು ತೀರ್ಮಾನಿಸಿ ಬಿಟ್ಟಿದ್ದೀಯೇನು?'' ಎಂಬುದಾಗಿ. ಮಹಿಳೆಯು ಉಂಗುರವನ್ನು ತೆಗೆದು ಗಾಂಧಿಗೆ ಅರ್ಪಿಸಿದಳು. ಚಪ್ಪಾಳೆಗಳ ಸುರಿಮಳೆಯೋ ಸುರಿಮಳೆ.

ವೇದಿಕೆಯ ಕಡೆಗೆ ನುಗ್ಗುತ್ತಿದ್ದವರಿಗೆ ಲೆಕ್ಕವೇ ಇಲ್ಲ. ಹಣವೂ ಒಡವೆ ವಸ್ತುಗಳೂ ಸುರಿಯುತ್ತಿದ್ದುವು. ಕೇಂದ್ರ ಶಕ್ತಿಯಂತೆ ಗಾಂಧಿ ಎಲ್ಲರನ್ನೂ ಆಕರ್ಷಿಸುತ್ತಿದ್ದರು. ಗಂಡಸರು, ಹೆಂಗಸರು, ಮಕ್ಕಳು ಎಲ್ಲರೂ ಗಲಾಟೆಯಲ್ಲಿ ದಾರಿಮಾಡಿಕೊಂಡು ಗಾಂಧಿಯ ಬಳಿಗೆ ಹೋಗಿ ಏನಾದರೂ ಒಂದು ಕಾಣಿಕೆಯನ್ನು ಒಪ್ಪಿಸುತ್ತಿದ್ದರು ಪದ್ಮಳ ಬಲಗಡೆಗಿದ್ದ ಗಂಡಸರು, ಎಡಗಡೆಗಿದ್ದ ಹೆಂಗಸರು, ಮುಂದಗಡೆ ಜಮಖಾನದ ಮೇಲೆ ಕುಳಿತಿದ್ದ ಮಕ್ಕಳು ಇವರಲ್ಲಿ ಯಾರಾದರೂ ಸುಮ್ಮನೆ ಕುಳಿತಿರಬೇಕಲ್ಲ!

ಪದ್ಮ ತನ್ನ ಬಳೆಗಳನ್ನು ಸೀರೆಯ ಸೆರಗಿನಲ್ಲಿ ಬಚ್ಚಿಟ್ಟುಕೊಂಡು ಮನಸ್ಸಿನಲ್ಲಿ ಏರಿಬರುತ್ತಿದ್ದ ಆವೇಶದೊಡನೆ ವಿಶೇಷ ಪ್ರಯಾಸದಿಂದ ಕಾದಾಡುತ್ತ ಕುಳಿತಿದ್ದಳು.

ನೂಕು ನುಗ್ಗಲು ಅಡಗಿತು. ಗಾಂಧೀಜಿಯ ಸುತ್ತ ಬೆಳ್ಳಿಯ ತಟ್ಟೆಗಳೇನು, ಬಟ್ಟಲುಗಳೇನು, ಗಡಿಯಾರಗಳೇನು, ಬಳೆಗಳೇನು, ಮುಗುತಿಗಳೇನು, ನಾಣ್ಯಗಳೇನು, ಹೂವಿನ ಹಾರಗಳೇನು—ರಾಸಿರಾಸಿಯಾಗಿ ಬಿದ್ದಿದ್ದುವು.

ಗಾಂಧೀಜಿ ಜನರನ್ನೆಲ್ಲ ಮನಸಾರ ವಂದಿಸಿ ಕಾಣಿಕೆಯ ರಾಸಿಯಲ್ಲಿ ಸೇರಿದ್ದ ಬೆಲೆಬಾಳುವ ವಸ್ತುಗಳನ್ನೆಲ್ಲ ಹರಾಜು ಹಾಕುತ್ತೇನೆಂಬುದಾಗಿ ತಿಳಿಸಿದರು. ಆದರೆ ಅದಕ್ಕೆ ಮೊದಲು ಇನ್ನೂ ಏನಾದರೂ ಬರಲಿದೆಯೋ ಎಂಬುದನ್ನು ಖಚಿತ ಮಾಡಿಕೊಳ್ಳಬೇಕಾದುದಿತ್ತು. "ಅಕ್ಕತಂಗಿಯರೆ, ನೀವು ಕೊಡಬೇಕಾದುದೆಲ್ಲ ಮುಗಿಯಿತೇ? ಇನ್ನೂ ಏನಾದರೂ ಇದೆಯೋ" ಎಂದು ಕೇಳಿ ಒಂದುಸಲ ಸಭಿಕರ ಕಡೆ ತಿರುಗಿನೋಡಿದರು. ಪದ್ಮಳು ಸೀರೆಯ ಸೆರಗಿನಲ್ಲಿ ಬಳೆಯನ್ನು ಇನ್ನೂ ಬಲವಾಗಿ ಮುಚ್ಚಿಕೊಳ್ಳ ತೊಡಗಿದಳು. ಆದರೆ ಕೈಯು ನಡುಗಿತು. ಗಾಂಧಿಯ ದೃಷ್ಟಿ ತನ್ನಕಡೆ ಸುಳಿದಾಗಲಂತೂ ತನ್ನ ಗುಟ್ಟೆಲ್ಲ ರಟ್ಟಾಗಿಹೋಯಿತೆಂದು ದಿಗಿಲುಬಿದ್ದಳು. ವೇದಿಕೆಯನ್ನು ಹತ್ತಿಹೋಗಿ, ಎರಡು ಬಳೆಗಳನ್ನೂ ತೆಗೆದು ಗಾಂಧೀಜಿಯ ಮುಂದಿಟ್ಟಳು. ಗಾಂಧಿ ಮಂದಹಾಸವನ್ನು ಬೀರಿ "ಬಹಳ ಸಂತೋಷ ತಂಗಿ" ಎಂದರು. ಪದ್ಮಳಿಗೊಂದು ಮಹಾ ಮುಹೂರ್ತ.

ಗಂಡ ಮನೆಗೆ ಬಹಳ ಹೊತ್ತುಮೀರಿ ಬಂದ. ಮರುಮಾತಾಡದೆ ಯಂತ್ರದಂತೆ ಕೂಳನ್ನು ತಿಂದು ಹಾಸಿಗೆಯಲ್ಲಿ ಬಿದ್ದುಕೊಂಡ. ಪದ್ಮಳ ಬರಿಗೈಯನ್ನು ಅವನು ಗಮನಿಸಲಿಲ್ಲ.

ತಾನು ಬಳೆ ಕಳೆದುಕೊಂಡುದು ಗಂಡನಿಗೆ ಗೊತ್ತಾದರೆ ಏನು ಮಾಡುತ್ತಾನೋ ಯಾರಿಗೆ ಗೊತ್ತು? ಗಂಟುಕಟ್ಟಿಕೊಂಡು ನಿಮ್ಮಪ್ಪನ ಮನೆಗೆ ಹೊರಡು ಎಂದು ಅಪ್ಪಣೆ ಮಾಡಬಹುದು. ಮೂರು ನಾಲ್ಕು

ತಿಂಗಳ ಕಾಲ ಮಾತು ಬಿಟ್ಟುಬಿಡಬಹುದು........ತನಗೇನು ಕಾಯ್ದುಕೊಂಡಿದೆಯೋ ಶಿವನೇ ಬಲ್ಲ. ಗಾಂಧಿಯನ್ನು ನೋಡುವುದಕ್ಕೆ ಹೋಗದೆ ಇದ್ದರೆ ಚೆನ್ನಾಗಿತ್ತಲ್ಲ ಎಂದುಕೊಂಡಳು. ಬೆಳಿಗ್ಗೆಯವರೆಗೆ ಒಂದು ಮಾತೂ ಹೇಳುವುದಿಲ್ಲವೆಂದು ಸಂಕಲ್ಪಮಾಡಿಕೊಂಡಳು. ಆದರೆ ಹನ್ನೊಂದು ಗಂಟೆಯ ವೇಳೆಗೆ, ಮನೋಸಾಮರ್ಥ್ಯವೆಲ್ಲ ಮುರಿದುಬಿತ್ತು. ತಡೆಯುವುದಕ್ಕಾಗಲಿಲ್ಲ. ಕಿತ್ತು ತಿನ್ನುತ್ತಿತ್ತು ಭಯ. ಗಂಡನ ಭುಜವನ್ನು ಹಿಡಿದು ಅಲ್ಲಾಡಿಸಿ ಎಚ್ಚರಗೊಳಿಸಿದಳು. ಎಬ್ಬಿಸಿ ಬಳೆಗಳ ವಿಷಯ ಹೇಳಿದಳು. ಗಂಡನಿಗೆ ತೀರ ನಿದ್ರೆ. ಅವಳೇನು ಹೇಳುತ್ತಿದ್ದಾಳೋ ಅವನಿಗೆ ಗೊತ್ತಾಗಲಿಲ್ಲ. ಪದ್ಮಳು ಇನ್ನೂ ಬಲವಾಗಿ ಅವನ ಭುಜವನ್ನು ಜಗ್ಗಿಸಿದಳು. ಬಳೆಗಳ ಸಂಗತಿ ಮತ್ತೆ ತಿಳಿಸಿದಳು. ಉತ್ತರ ಹೇಳುವ ಮುಂಚೆ ಇನ್ನೊಂದು ವರಸೆ ಜೊಂಪು ಹತ್ತಿತ್ತು. ಯುಗಗಳು ಕಳೆದು ಹೋದುವೇನೋ ಎನ್ನಿಸಿತು ಪದ್ಮಳಿಗೆ. ಕೊನೆಗವನು ಬಹಳ ತೆಪ್ಪಗೆ ಉಸುರಿದ "ನಾನು ಹೇಳಿರಲಿಲ್ಲವೆ ಒಡವೆ ಇಟ್ಟುಕೊಂಡು ಹೋಗಬೇಡ ಎಂದು? ನನಗೆ ಗೊತ್ತು.'' ಅವಳು ಇದಕ್ಕೆ ಉತ್ತರ ಹೇಳಲಿಲ್ಲ. ಇಬ್ಬರೂ ಕೆಲವು ನಿಮಿಷ ಮೌನವಾಗಿದ್ದರು. ಆಮೇಲೆ ಗಂಡ "ಅದಿರಲಿ, ನಾನೇನು ಮಾಡಿದೆ ಹೇಳ್ತೀನಿ ಕೇಳು. ಮೀಟಿಂಗಿಗೆ ಹೋಗಕೂಡದು ಅಂತ ಮೊದಲು ತೀರ್ಮಾನಿಸಿಕೊಂಡಿದ್ದ. ಆದರೆ ಸ್ನೇಹಿತನೊಬ್ಬನ ಜತೆಯಲ್ಲಿ ಹೇಗೋ ಏನೋ ಅಲ್ಲಿಗೆ ನುಗ್ಗಿದೆ. ಜೇಬಿನಲ್ಲಿ ಐವತ್ತು ರೂಪಾಯಿತ್ತು. ನಾಳೆ ಬೆಳಿಗ್ಗೆ ಮನೆ ಬಾಡಿಗೆ ಕೊಡೋಣಾಂತ ಮಧ್ಯಾಹ್ನ ತಾನೆ ಬ್ಯಾಂಕಿನಿಂದ ತಂದಿದ್ದೆ. ಸ್ವಯಂ ಸೇವಕ ಬಂದ, ಹುಂಡಿಯಲ್ಲಿ ಹಾಕಿಬಿಟ್ಟೆ'' ಎಂದ.

"ಸ್ವಲ್ಪವಾದರೂ ನಿಮಗೆ ಮುಂದಾಲೋಚನೆಯೇ ಇಲ್ಲ! ನಾಳೆ ಬಾಡಿಗೆಗೆ ಏನು ಮಾಡುವುದು?'' ಎಂದು ಕೇಳಿದಳು ಪದ್ಮ ಮುನಿಸಿಕೊಂಡು.

---

# ಹಾವಿನ ಹಾಡು

ಸಂಗೀತ ಕಚೇರಿ ಆಗತಾನೆ ಮುಗಿದಿತ್ತು. ನಾವು ಮನೆಗೆ ಹಿಂದಿರುಗುತ್ತಿದ್ದೆವು. ಸಂಗೀತ ಬಹಳ ಇಂಪಾಗಿತ್ತು. ನಮ್ಮ ಗುಂಪಿನಲ್ಲಿ ಹರಟೆ ಹರಿಯಪ್ಪನೂ ಇದ್ದನೆಂಬುದು ಕಾಣಿಸುವವರೆಗೂ ನಮಗೆ ಅದೇ ಭಾವನೆ ಇತ್ತು. ಪಾತಾಳಲೋಕದ ಚಿತ್ರಹಿಂಸೆಯಿಂದ ತಪ್ಪಿಸಿಕೊಂಡು ಬಂದವನಂತೆ ಒದ್ದಾಡುತ್ತಿದ್ದ ಅವನು; ನಾವು ಹುಬ್ಬುಗಂಟುಹಾಕಿಕೊಂಡು ಅವನ ಕಡೆ ನೋಡಿ, " ಓಹೋ, ಕರ್ನಾಟಕ ಸಂಗೀತ ನೂರು ವರ್ಷಗಳ ಹಿಂದೆಯೇ ಸತ್ತು ಹೋಗಿಬಿಟ್ಟಿತೆಂದು ಭಾವಿಸುವ ದೊಡ್ಡ ಮನುಷ್ಯರಲ್ಲಿ ನೀವೂ ಒಬ್ಬರೋ! ಅಥವಾ ತ್ಯಾಗರಾಜರು, ದೀಕ್ಷಿತರು, ಶಾಮಾಶಾಸ್ತ್ರಿಗಳು ಮುಂತಾದ ಮಹಾಘಟಗಳೊಡನೆಯೇ ಸದಾ ಓಡಾಡುತ್ತಿದ್ದು ಬಿಟ್ಟುದರಿಂದ ನಮ್ಮ ಕಾಲದ ಸಂಗೀತವೆಲ್ಲ ನಿಮ್ಮ ಪಾಲಿಗೆ ವಿಷದ ಹಾಗೆ ಕಾಣುತ್ತದೆಯೋ? ಇಲ್ಲದೆ ಹೋದರೆ, ಒಂದು ಹಾಡನ್ನು ಕೇಳಿದೊಡನೆ ಅದನ್ನು ಛಿದ್ರಛಿದ್ರವಾಗಿ ಹರಿದು ಬಿಸಾಟು ಟೀಕೆ ಬೋಕೆಗಳಿಂದ ಅದನ್ನು ಹೂತು ಹಾಕುವವರೆಗೂ ತೃಪ್ತಿಯುಂಟಾಗದಂಥ ಪಂಡಿತಮಂಡಲಿಗೆ ಸೇರಿದವರೋ? '' ಎಂದು ಮೂದಲಿಸಿದೆವು.

" ಅಯ್ಯೋ ದೇವರೂ, ನಾನು ಇದೊಂದೂ ಅಲ್ಲ. ನಾನೊಬ್ಬ ಬಡಪ್ರಾಣಿ. ಆದರೆ ನಾನೇನು ಮಾತನಾಡುತ್ತಿದ್ದೇನೆಂಬುದು ನನಗೆ ಚೆನ್ನಾಗಿ ಗೊತ್ತುಂಟು. ನನಗೂ ಒಂದಿಷ್ಟು ಸಂಗೀತದ ಗಂಧ ಇದೆ. ನಿಜ ಹೇಳಬೇಕಾದರೆ ನಿಮ್ಮೆಲ್ಲರಿಗಿಂತಲೂ ಒಂದು ಪಟ್ಟು ಹೆಚ್ಚಾಗಿಯೇ ಇದೆ. ಅದರಿಂದಲೇ ನನಗೆ ಸಂಕಟವಾಗುವುದು; ನಮ್ಮ ಸಂಗೀತ ಈ ಮಟ್ಟಕ್ಕಿಳಿದು ಹೋಗಿದೆಯಲ್ಲಾ ಎಂದು." ಎಂದ ಹರಟೆ ಹರಿಯಪ್ಪ.

ಅವನು ಆಡಿದ ಮಾತನ್ನು ಕಿವಿಯ ಮೇಲೆಯೇ ಹಾಕಿಕೊಳ್ಳದೆ ನಮ್ಮ ನಮ್ಮಲ್ಲೇ ಮಾತಾಡಿಕೊಂಡು ಅವನ ಬಾಯನ್ನು ಅಡಗಿಸೋಣವೆಂದು ಪ್ರಯತ್ನಿಸಿದೆವು. ಆದರೆ ಅವನು ಬಿಟ್ಟಾನೆಯೇ? ನಮ್ಮ ಬೆನ್ನು

ಹತ್ತಿ ಬಂದೇ ಬಿಟ್ಟ. ನಮ್ಮ ಕಿವಿಗೆ ಬಿಡುವೇ ಕೊಡಲಿಲ್ಲ. ನಾವು ಕೇಳಲೇ ಬೇಕಾಯಿತು.

ಈಗ ನನ್ನನ್ನು ನೋಡಿದರೆ, (ಎಂದು ಹರಟೆ ಹರಿಯಪ್ಪ ಹೇಳಿದ) ಹಳ್ಳಿಗಾಡಿನ ರೈತರಿಗೆ ಸೀಮೆಯ ಗೊಬ್ಬರ ಮಾರುವುದಕ್ಕಿಂತ ಹೆಚ್ಚಿನ ಕಲೆಗಾರಿಕೆ ಕಲಾಭಿಮಾನ ನನ್ನಲ್ಲಿ ಇಲ್ಲವೆಂದೇ ನೀವೆಲ್ಲರೂ ಭಾವಿಸ ಬಹುದು. ಆದರೆ ಹಿಂದೊಂದು ಕಾಲದಲ್ಲಿ ಸಂಗೀತ ಕಲಿತು ಮಹಾ ವಿದ್ವಾಂಸನಾಗಬೇಕೆಂಬ ಆಸೆ ಬಹಳ ಇತ್ತು ನನಗೆ, ಇನ್ನೇನು ಆಗಿಯೂ ಬಿಡುತ್ತಿದ್ದೆ........ವರ್ಷಗಟ್ಟಲೆ ಹಿಂದಿನ ಮಾತು. ಆಗ ನಾನು ಕಂಬಂ ಎನ್ನುವ ಹಳ್ಳಿಯಲ್ಲಿದ್ದೆ. ಸಣ್ಣ ಹಳ್ಳಿ. ಮಾಲ್ಗುಡಿಯಿಂದ ಎಂಬತ್ತು ಮೈಲಿ ದೂರ. ಆ ಊರಿನಲ್ಲಿ ಒಬ್ಬ ಮಹಾ ಪುರುಷರಿದ್ದರು. ಸರಸ್ವತಿಯೇ ಅವರಲ್ಲಿ ಅವತರಿಸಿರಬಹುದು. ಸಂಗೀತದಲ್ಲಿ ಅವರದು ಅಂತಹ ಪ್ರತಿಭೆ. ಅವರು ಕೊಳಲನ್ನು ಬಾರಿಸಿದರೆಂದರೆ ಹಳ್ಳಿಯ ಹಸುಗಳು ಅವರ ಹಿಂದೆಯೇ ಹಿಂಡುಕಟ್ಟಿಕೊಂಡು ಓಡುತ್ತಿದ್ದುವೆಂದು ನೋಡಿದವರು ಹೇಳುತ್ತಿದ್ದರು. ಬಹುಶಃ ಕಳೆದ ಶತಮಾನದಲ್ಲಿ ಅವರಿಗಿಂತ ಪ್ರೌಢಿಮೆ ಇದ್ದವರು ಇಲ್ಲವೆಂದೇ ಹೇಳಬಹುದು. ಆದರೆ ಅವರು ಹೆಸರುಗಿಸರಿಗೆ ಆಸೆಪಟ್ಟವರಲ್ಲ. ಖ್ಯಾತಿಯನ್ನು ಅರಸಿದವರಲ್ಲ. ಹಳ್ಳಿಯ ಹಲವು ಜನರ ಹೊರತು ಬೇರೆಯಾರಿಗೂ ಅವರ ಹೆಸರೇ ತಿಳಿಯದು. ಅಪರೂಪಕ್ಕೊಂದು ಸಲ ಹಳ್ಳಿಯ ಗಡಿಯಲ್ಲಿ ಕಚೇರಿ ಮಾಡುತ್ತಿದ್ದುದುಂಟು. ಪಿತ್ರಾರ್ಜಿತ ವಾದ ಭೂಮಿಕಾಣಿಯಿಂದ ಬರುತ್ತಿದ್ದ ಅಷ್ಟಿಷ್ಟು ಪುಡಿಕಾಸಿನಿಂದಲೇ ಅವರು ತೃಪ್ತರಾಗಿದ್ದರು. ನಾನು ಅವರ ಬಟ್ಟೆಗಳನ್ನೊಗೆದು, ಅವರ ಮನೆ ಯನ್ನು ಗುಡಿಸಿ, ಅವರ ಮನೆ ಲೆಕ್ಕವನ್ನು ಬರೆದಿಟ್ಟು, ಅವರಿಗಾಗಿ ಪರಿಚಾರಿಕೆಯನ್ನು ಮಾಡುತ್ತಿದ್ದೆ. ಮನಸ್ಸು ತಿರುಗಿದಾಗ ಅವರು ಈ ಕುಚೇಲನನ್ನು ಕರೆದು ಒಂದೆರಡು ಹಾಡುಗಳನ್ನು ಧಾರೆಯೆರೆಯುತ್ತಿದ್ದರು. ಆದರೆ ಅವರ ಸಾಮಿಪ್ಯ, ಅವರ ವ್ಯಕ್ತಿತ್ವ ಅವುಗಳಿಗೆ ಬೆಲೆಕಟ್ಟಲಾದೀತೆ ? ಬೇರೆಯವರ ಕೈಯ್ಯಲ್ಲಿ ಒಂದು ವರ್ಷ ಕಲಿಯುವುದೂ ಒಂದೇ, ನಮ್ಮ ಗುರುಗಳ ಹತ್ತಿರ ಒಂದು ಗಂಟೆ ಕಲಿಯುವುದೂ ಒಂದೇ.

ಮೂರು ವರ್ಷಗಳ ಕಾಲ ಉಳಿ ಸುತ್ತಿಗೆಗಳನ್ನು ಹಿಡಿದು ಕಡೆದ ಮೇಲೆ ನನಗೂ ಒಂದು ಆಕಾರ ಬರುತ್ತಿದೆಯೆಂದು ನಮ್ಮ ಗುರುಗಳಿಗೆ ಭರವಸೆಯಾಯಿತು. "ಇನ್ನೊಂದು ವರ್ಷ. ಆಮೇಲೆ ನೀನು ಪಟ್ಟಣಕ್ಕೆ ಹೋಗಿ, ಎಂಥ ಕಚೇರಿಯನ್ನಾದರೂ ಮಾಡಬಲ್ಲೆ ಬಿಡು. ಆದರೆ ಖ್ಯಾತಿಗೆ ನೀನು ಬೆಲೆ ಕಟ್ಟದ್ದೀಯೋ ಇಲ್ಲವೋ ನನಗೇನು ಗೊತ್ತು?" ಎಂದರು ಒಂದು ದಿನ. ನನಗೆ ಖ್ಯಾತಿಯ ಮೇಲೆ ಆಸೆಯಿರಲಿಲ್ಲವೆ? ಅನಾಮಧೇಯತ್ವದ ಮಹಿಮೆಯನ್ನು ನಾನೊಲ್ಲೆನಪ್ಪ. ನನಗೆ ಹೆಸರು ಬೇಕಾಗಿತ್ತು. ಐಶ್ವರ್ಯ ಬೇಕಾಗಿತ್ತು. ಮಾರನೆಯ ವರ್ಷ ಮದರಾಸಿಗೆ ಹೋಗಿ ಅಲ್ಲಿನ ಸಂಗೀತೋತ್ಸವದಲ್ಲಿ ಭಾಗವಹಿಸಬೇಕು ಆಮೇಲೆ ನನ್ನ ಹೆಸರು ಯಾರಬಾಯಿನಲ್ಲೂ ಪ್ರತಿ ಧ್ವನಿತವಾಗುವಂತೆ ಮಾಡಬೇಕು ಎಂದು ನಾನು ಕನಸು ಕಂಡದ್ದೂ ಕಂಡದ್ದೇ. ಹೊಸ ಜಗತ್ತುಗಳ ಬಾಗಿಲುಗಳನ್ನು ತೆರೆಯುವಂತೆ ಮಾಯಗಾರನ ಯಕ್ಷಿಣಿ ಕೋಲೇನೋ ಎಂಬಂತೆ ನನ್ನ ಕೊಳಲನ್ನು ಪ್ರೀತಿಸುತ್ತಿದ್ದೆ ನಾನು. ಆಗ ನಾನು ಬೀದಿಯ ಕೊನೆಯಲ್ಲಿದ್ದ ಒಂದು ಸಣ್ಣ ಗುಡಿಸಲಲ್ಲಿ ವಾಸಮಾಡುತ್ತಿದ್ದೆ. ರಾತ್ರಿ ಬಹಳ ಹೊತ್ತು ಎದ್ದು ಕುಳಿತಿದ್ದು ಇರುಳಿನ ಬಹು ಭಾಗ ಕಳೆಯುವವರೆಗೂ ವೇಣುವಾದನದ ಅಭ್ಯಾಸ ಮಾಡಿಕೊಳ್ಳುತ್ತಿರುವುದು ನನ್ನ ವಾಡಿಕೆ. ಅದೇ ರೀತಿಯಲ್ಲಿ ಒಂದು ರಾತ್ರಿ ನಾನು ಭೈರವೀ ರಾಗದಲ್ಲಿ ಮೈಮರೆತಿದ್ದೆ. ಆ ವೇಳೆಗೆ ಬಾಗಿಲನ್ನು ಯಾರೋ ತಟ್ಟಿದರು. ನನಗೆ ರೇಗಿತು.

"ಯಾರದು" ಎಂದೆ.

"ಒಬ್ಬ ಸಾಧು; ಅವನಿಗೊಂದು ಹಿಡಿ ಅನ್ನ ಬೇಕು"

"ಇಷ್ಟು ಹೊತ್ತಿನಲ್ಲೇ? ಲಕ್ಷಣವಾಯಿತು! ನಡೆ ನಡೆ. ಕಂಡ ಕಂಡಾಗಲೆಲ್ಲ ಬಂದು ಗೋಳು ಹುಯ್ಯಬೇಡ."

"ಹಸಿವಿಗೆ ಹೊತ್ತೇನು ಗೊತ್ತೇನು?

"ನಡೆ. ಇಲ್ಲೇನೂ ಇಲ್ಲ ನನ್ನ ಹತ್ತಿರ. ನಾನೇ ನನ್ನ ಗುರು ಕೊಟ್ಟದನ್ನು ಉಂಡುಕೊಂಡಿರುವವನು."

“ಹ್ಞ. ಒಂದು ಸಣ್ಣ ಕಾಸು, ಕಡೆಗೆ ಒಂದು ಒಳ್ಳೆಯ ಮಾತು– ಅಷ್ಟನ್ನಾದರೂ ಕೊಡಬೇಡವೇ ಸಾಧುವಿಗೆ? ಕಾಶಿ, ರಾಮೇಶ್ವರ ಎಲ್ಲ ಕಡೆಗಳಲ್ಲೂ ಸುತ್ತಿ ಬಂದಿದ್ದಾನೆ.”

“ಮುಚ್ಚು ಬಾಯಿ” ಎಂದು ಕೂಗಿಕೊಂಡು ನಾನು ಭೈರವಿ ರಾಗಕ್ಕೆ ಮತ್ತೆ ಇಳಿದೆ.

ಹದಿನೈದು ನಿಮಿಷಗಳಾದಮೇಲೆ ಮತ್ತೆ ಬಾಗಿಲ ಬಡಿತ ಮೊದಲಾಯಿತು. ನನಗೆ ಮಿತಿಮೀರಿದ ಕೋಪ ಬಂತು. “ನಿನಗೇನು ಬುದ್ಧಿಗಿದ್ಧಿ ಇದೆಯೋ ಇಲ್ಲವೋ? ಬೇಡ ಬೇಡ ಎಂದರೂ ಬಂದು ಬಂದು ತೊಂದರೆ ಮಾಡುತ್ತೀಯಲ್ಲ?”

“ನೀನು ದಿವ್ಯವಾಗಿ ಕೊಳಲನೂದುತ್ತೀಯೆ. ಬಾಗಿಲು ತೆಗೆ, ನನ್ನ ಕಿವಿಗೂ ಬೀಳಲಿ. ಹೊಟ್ಟೆಗೆ ಅನ್ನ ಕೊಡುವುದಿಲ್ಲವೆಂದೆ. ಸಂಗೀತವನ್ನಾದರೂ ಇಲ್ಲವೆನ್ನಬೇಡ.”

ನಾನು ಅಭ್ಯಾಸ ಮಾಡಿಕೊಳ್ಳುವಾಗ ಬೇರೆಯಾರಾದರೂ ಬಂದರೆ ನನಗೆ ಸರಿಬೀಳುತ್ತಿರಲಿಲ್ಲ. ಈ ಭಿಕ್ಷದವನು ಅಡ್ಡಿಮಾಡುತ್ತಿರುವುದರಿಂದಲಂತೂ ವಿಪರೀತ ರೋಷ ಬಂತು. “ಅಲ್ಲಿ ನಿಂತುಕೊಂಡು ವಾಗ್ವಾದ ಮಾಡಬೇಡ. ನೀನು ಈಗಲೇ ಹೊರಡದೆ ಹೋದರೆ, ಹೊರಗೆ ಬಂದು, ನಿನ್ನನ್ನು ಕತ್ತುಹಿಡಿದು ದಬ್ಬಿ ಬಿಟ್ಟೇನು”

“ಅಹಾ. ಕೆಟ್ಟ ಮಾತುಗಳು. ನೀನು ನನ್ನನ್ನೇನೂ ದಬ್ಬ ಬೇಕಾದುದಿಲ್ಲ. ನಾನೇ ಹೋಗುತ್ತೇನೆ. ಆದರೆ ಒಂದನ್ನು ನೆನಪಿನಲ್ಲಿಡು. ನಿನ್ನ ಸಂಗೀತಕ್ಕೆ ಇದೇ ಕೊನೆಯ ದಿನ. ನಾಳೆಯ ದಿನ ನಿನ್ನ ಕೊಳಲಿಗೆ ಒಂದು ಹಿಡಿಯಷ್ಟು ಮಣ್ಣು ಕೂಡ ಹುಟ್ಟುವುದಿಲ್ಲ.”

ಮರದ ಪಾದರಕ್ಷೆಗಳ ಸದ್ದಾಯಿತು. ಮನೆಯ ಮೆಟ್ಟಲನ್ನಿಳಿದು ಅವನು ಹೊರಟುಹೋದ. ಶನಿ ತೊಲಗಿತಲ್ಲ ಎಂದುಕೊಂಡು ಹತ್ತು ನಿಮಿಷಗಳ ಕಾಲ ಬಾರಿಸಿದೆ. ಆದರೆ ಮನಸ್ಸೇಕೋ ಕೊರೆಯುತ್ತಿತ್ತು. ಅವನು ಹೊರಡುವಾಗ ಹೇಳಿದ ಮಾತು......ಅದರ ಅರ್ಥವೇನು? ಏಕೆ ಹಾಗೆಂದ

ಅವನು? ಎದ್ದೆ. ಲಾಂದ್ರ ತೆಗೆದುಕೊಂಡು ಹೊರಗೆಹೊರಟೆ. ಕಡೆಯ ಮೆಟ್ಟಿಲ ಮೇಲೆ ನಿಂತುಕೊಂಡು, ಲಾಂದ್ರವನ್ನು ಎತ್ತಿ ಹಿಡಿದು, ಕತ್ತಲು ತುಂಬಿದ ಬೀದಿಯನ್ನು ದಿಟ್ಟಿಸಿ ನೋಡಿದೆ. ಹಿಂದಿರುಗಿದೆ. ಮತ್ತೆ ಅವನು ಬರಬಹುದೆಂಬ ದೂರದ ಆಸೆಯಿಂದ ಬಾಗಿಲನ್ನು ಅರ್ಧ ತೆರೆದಿದ್ದೆ. ಲಾಂದ್ರ ವನ್ನು ಗೋಡೆಗೆ ನೇತುಹಾಕಿ ಕುಳಿತೆ. ಗೋಡೆಯ ಮೇಲಿದ್ದ ದೇವರುಗಳ ಪಟಗಳಿಗೆಲ್ಲ ಕೈಮುಗಿದು, ಈ ಕಾಣದ ಸಾಧುವಿನಿಂದ ಏನೂ ಹಾನಿಯಾಗ ದಂತೆ ಕಾಪಾಡಬೇಕೆಂದು ಬೇಡಿಕೊಂಡೆ. ಮತ್ತು ನಾನಾಯಿತು, ಸಂಗೀತ ವಾಯಿತು.

ನನ್ನ ಕೊಳಲಿಂದ ಹಾಡಾದಮೇಲೆ ಹಾಡು ಧಾರಾಕಾರವಾಗಿ ಹರಿದು ಬರುತ್ತಿತ್ತು. ಆ ಸಂಗೀತವು ಈ ಮರ್ತ್ಯಲೋಕವನ್ನು ಅಮರಲೋಕ ವನ್ನಾಗಿ ಪರಿವರ್ತಿಸಿತು. ಬಿದಿರಿನ ತುಂಡಿನಲ್ಲಿ ಉಸಿರನ್ನು ಊದುತ್ತಿದ್ದ ಹುಲು ಮನುಷ್ಯನಾಗಿರಲಿಲ್ಲ. ನಾನು ದೇವತೆಗಳಲ್ಲೊಬ್ಬನಾಗಿದ್ದೆ. ಗೋ ಡೆಗೆ ನೇತುಹಾಕಿದ್ದ ದೀಪವು ಸ್ವರ್ಗಲೋಕದ ದಿವ್ಯ ಸಭೆಯಲ್ಲಿ ರಾರಾಜಿಸು ತ್ತಿದ್ದ ತಾರಗೆಯಾಗಿತ್ತು.........ನಾನು ಪುನ್ನಾಗ ವರಾಳಿ ರಾಗಕ್ಕೆ ಬಂದೆ. ಹಾವಿನಹಾಡು ಅದು. ಸರ್ಪವು ಸರ್ವವೈಭವದಲ್ಲೂ ನನಗೆ ಕಾಣಿಸು ತ್ತಿತ್ತು. ಅದರ ಗಂಟಲಲ್ಲಿ ಅಡಗಿದ್ದ ವಿಷಕ್ಕೆ ಒಂದು ನವೀನ ಕಳೆಯೇ ರಿತ್ತು. ಈಗ ಅದು ಶಿವನ ತಲೆಯನ್ನು ಅಲಂಕರಿಸುತ್ತ ತನ್ನ ದೈವತ್ವವನ್ನು ಮೆರೆಯುತ್ತಿತ್ತು: ಪಾರ್ವತಿಯದನ್ನು ಕಂಕಣವಾಗಿ ತೊಟ್ಟಿದ್ದಳು: ಸುಬ್ರಹ್ಮಣ್ಯನು ಅದರೊಡನೆ ಆಟವಾಡುತ್ತಿದ್ದನು: ಈಗದು ವಿಷ್ಣುವಿನ ಸುಪ್ಪತ್ತಿಗೆಯಾಗಿತ್ತು. ರಾಗದ ಎಳೆಯೆಳೆಯೂ ಸರ್ಪರಾಜನಿಗೆ ಅಪೂರ್ವ ವಾದ ಗಾಂಭೀರ್ಯವನ್ನು ಕೊಟ್ಟಿತು. ಕಂಡವರು ಭಯಭಕ್ತಿಗಳಿಂದ ಮೈಮರೆಯಬೇಕು.

ಇದೇನಿದು? ಏನು ಕಾಣಿಸುತ್ತದೆ! ನನಗೂ ಬಾಗಿಲಿಗೂ ನಡುವೆ ಒಂದು ಕಾಳನಾಗ! ಘಟಸರ್ಪವು ತನ್ನ ಭಾರಿಯ ಹೆಡೆಯನ್ನು ಬಿಚ್ಚಿ

ಆನಂದಪರವಶತೆಯಿಂದ ಅದನ್ನು ಬೀಸುತ್ತಿದೆ. ನಾನು ಹಾಡನ್ನು ನಿಲ್ಲಿಸಿ, ಇದೇನು ದಿಟವೋ ಸಟಿಯೋ, ನಾನು ಎಚ್ಚರದಿಂದಿದ್ದೇನೋ ಇಲ್ಲವೋ ಕಂಡುಕೊಳ್ಳಲು ಕಣ್ಣುಗಳನ್ನು ಉಜ್ಜಿಕೊಂಡೆ. ಆದರೆ ನಾನು ಹಾಡನ್ನು ನಿಲ್ಲಿಸಿದ ತಕ್ಷಣವೇ, ಹಾವು ನನ್ನ ಕಡೆ ತಿರುಗಿ ರೋಷಪೂರಿತದೃಷ್ಟಿಯನ್ನು ಬೀರಿ, ಮುಂದಕ್ಕೆ ನುಗ್ಗಿ ಬಂತು. ಅಷ್ಟು ಕಪ್ಪಗೂ ಅಷ್ಟು ಉದ್ದವಾಗೂ ಇರುವ ಹಾವನ್ನು ನಾನು ನನ್ನ ಜೀವಮಾನದಲ್ಲೇ ಕಂಡಿಲ್ಲ. ನನ್ನ ಪ್ರಾಣವನ್ನು ರಕ್ಷಿಸಬೇಕೆಂದಿದ್ದ ಯಾವುದೋ ಒಂದು ಅಂತರಾತ್ಮ ನುಡಿಯಿತು : "ಬಾರಿಸು, ಬಾರಿಸು, ನಿಲ್ಲಿಸಬೇಡ" ಎಂದು. ಸರಕ್ಕೆಂದು ನಾನು ಕೊಳಲನ್ನು ಕಚ್ಚಿಕೊಂಡು ಹಾಡನ್ನು ಮುಂದುವರಿಸಿದೆ. ಹಾವು ನನ್ನಿಂದ ಮೂರೇಮೂರು ಗಜಗಳ ದೂರದಲ್ಲಿತ್ತು. ನಾನು ಹಾಡನ್ನು ಆರಂಭಿಸಿದೊಡನೆ ನಿಂತಿತು. ನಿಂತಲ್ಲಿಯೇ ತನ್ನ ಉದ್ದವಾದ ದೇಹದ ಕಾಲುಭಾಗವನ್ನು ಎತ್ತಿಕೊಂಡು, ಒಂದುಸಲ ಹೆಡೆಯನ್ನು ಎಂಟು ದಿಕ್ಕುಗಳಿಗೂ ತೋರಿಸಿ, ತನ್ನ ಗುಂಡುಕಣ್ಣುಗಳನ್ನು ನನ್ನ ಮೇಲೆಯೇ ನೆಟ್ಟು, ಸ್ವಲ್ಪವಾದರೂ ಚಲಿಸದೆ, ನನ್ನ ಸಂಗೀತವನ್ನು ಆಲಿಸುತ್ತಿತ್ತು. ಕರಿಯಕಲ್ಲಿನಿಂದ ಕಡೆದಿದ್ದರೇನೋ ಎನ್ನುವಷ್ಟು ನಿಶ್ಚಲವಾಗಿ ನಿಂತಿತ್ತು.

ನಾನು ಕೊಳಲೂದುತ್ತ ಊದುತ್ತ ಹಾವಿನ ಕಡೆಯೇ ನೋಡುತ್ತಿದ್ದೆ. ಅದರ ದರ್ಪ, ಅದರ ಗತ್ತು ಇವುಗಳನ್ನೆಲ್ಲ ಕಂಡು, "ಯಾವ ದೇವರು ತಾನೇ ಇಂತಹ ಸುಂದರವಾದ ವಸ್ತುವನ್ನು ತನ್ನ ಶಿರಾಭರಣವಾಗಿ ಮಾಡಿಕೊಳ್ಳಲು ಇಚ್ಛಿಸುವುದಿಲ್ಲ?" ಎನಿಸಿತು ನನಗೆ. ಆ ಹಾಡನ್ನು ಮೂರುಸಲ ಬಾರಿಸಿದಮೇಲೆ ಇನ್ನೊಂದು ಹಾಡನ್ನು ಆರಂಭಿಸಿದೆ. ಹಾವು ಸರ್ರನೆ ತಿರುಗಿ "ಇದೇನಿದು ?" ಎನ್ನುವಂತೆ ನನ್ನ ಕಡೆ ನೋಡಿ, ಭಾರಿಯಾಗಿ ಬುಸುಗುಟ್ಟಿತು. ಇನ್ನಷ್ಟು ಮುಂದೆ ಸರಿಯುವಂತೆ ಚಲಿಸಿತು. ನಾನು ಕೂಡಲೆ ಹಾವಿನಹಾಡನ್ನು ಮತ್ತೆ ಆರಂಭಿಸಿದೆ; ಮತ್ತೆ ಹಾವು ಪ್ರತಿಮೆಯ ಮುದ್ರೆಯನ್ನು ತಾಳಿತು.

ಹೀಗೆ ಆ ಹಾಡನ್ನು ಎಷ್ಟುಸಲ ಬಾರಿಸಿದೆನೋ ಲೆಕ್ಕವೇ ಇಲ್ಲ.

ಯಾವ ಹಾಡೇ ಆಗಲಿ, ಅದೆಷ್ಟೇ ಘನವಾದ ಕೀರ್ತನೆಯಾಗಿರಲಿ, ಹತ್ತು ಹನ್ನೆರಡು ಸಲ ಒಂದೇಸಮನೆ ಬಾರಿಸಿದರೆ ತಲೆಚಿಟ್ಟು ಹಿಡಿದುಬಿಡುತ್ತದೆ: ಹಾಡನ್ನು ಬದಲಾಯಿಸೋಣವೆಂದು ಒಂದೆರಡು ಸಲ ಪ್ರಯತ್ನಿಸಿ ನೋಡಿದೆ. ಆದರೆ ಹಾವು ಭಯಹುಟ್ಟಿಸುವ ರೀತಿಯಲ್ಲಿ ಚಲಿಸಿತು. ಒಂದುಸಲವಂತೂ, ಆದದ್ದಾಗಲೆಂದು ನಾನು ಕೊಳಲನ್ನೆಸೆದು ಕಾಲಿಗೆ ಬುದ್ಧಿ ಹೇಳುವುದರಲ್ಲಿದ್ದೆ. ಆದರೆ ಸರ್ಪವು ಸಂಪೂರ್ಣವಾಗಿ ಎದ್ದುನಿಂತು ಒಂದೇಟಿನಲ್ಲಿ ನನ್ನ ಗತಿಯನ್ನು ಪೂರಯಿಸುವಂತೆ ಬೆದರಿಸಿತು. ಬಾಲ ಮುದುರಿಕೊಂಡು ನಾನು ಮತ್ತೆ ಅದೇ ಹಾಡನ್ನು ಬಾರಿಸಿದೆ. ರಾತ್ರಿಯೆಲ್ಲ ಅದೇ ಹಾಡನ್ನು ಬಾರಿಸಿದೆ. ಶ್ರಾವಕಮಹಾಶಯ ನನ್ನನ್ನು ಬಿಡುವ ಸೂಚನೆಯೇ ತೋರಲಿಲ್ಲ. ಬರಬರುತ್ತ ನನ್ನ ಪ್ರಾಣ ಉಡುಗಿತು. ತಲೆ ತಿರುಗಿತು. ಉಸಿರನ್ನು ಊದಿ ಊದಿ ಕೆನ್ನೆಗಳೂ ದವಡೆಗಳೂ ವಿಪರೀತ ವಾಗಿ ನೋಯತೊಡಗಿದುವು. ನನ್ನ ಎದೆಯ ಚೀಲದಿಂದ ಕೊನೆಯ ಗಾಳಿಯ ಅಣುವನ್ನು ಬರಿದುಮಾಡಿದಂತಾಗಿ ಹೋಯಿತು. ಇನ್ನೆಲ್ಲ ಒಂದೆರಡು ಗಳಿಗೆ, ಅನಂತರ ಸತ್ತು ಬಿದ್ದುಬಿಡುತ್ತೇನೆ ಎನ್ನಿಸಿಬಿಟ್ಟಿತು. ಹಾವು ನನ್ನ ಮೇಲೆ ಬಿದ್ದು ತನ್ನ ಮೈಯನ್ನು ನನ್ನ ಸುತ್ತಲೂ ಸುತ್ತಿ ಮೂಳೆ ಮೂಳೆಯನ್ನೂ ಪುಡಿ ಪುಡಿ ಮಾಡಿ ತನ್ನ ದವಡೆಯಲ್ಲಿದ್ದ ವಿಷವ ನೆಲ್ಲ ನನ್ನ ಮೈಯೊಳಕ್ಕೆ ಸುರಿದರೂ ಪರವಾ ಇಲ್ಲ ಎನಿಸುವ ಸ್ಥಿತಿಗೆ ಬಂದುಬಿಟ್ಟಿದ್ದೆ ನಾನು ಕೊಳಲನ್ನು ಒಗೆದು, ಹಾವಿನ ಮುಂದೆ ಬಿದ್ದು ಸಾಷ್ಟಾಂಗ ನಮಸ್ಕಾರ ಮಾಡುತ್ತ "ಓ ನಾಗರಾಜ, ನೀನು ದೇವರು. ನಿನಗೆ ಪ್ರೀತಿಯಾದರೆ ನನ್ನನ್ನು ಕೊಂದುಬಿಡು. ನಾನಿನ್ನು ಬಾರಿಸಲಾರೆ...." ಎಂದು ಮೊರೆಯಿಟ್ಟುಕೊಂಡೆ........

ನಾನು ಮತ್ತೆ ಕಣ್ಣು ಬಿಟ್ಟಾಗ ಹಾವು ಹೊರಟು ಹೋಗಿತ್ತು. ಗೋಡೆಯ ಮೇಲಿದ್ದ ದೀಪವು ಮುಂಜಾನೆಯ ಬೆಳಕಿನ ನಡುವೆ ಕಂಡೂ ಕಾಣದಂತೆ ಉರಿಯುತ್ತಿತ್ತು. ನನ್ನ ಕೊಳಲು ಹೊಸಿಲ ಬಳಿ ಬಿದ್ದಿತ್ತು.

ಮಾರನೆಯ ದಿನ ನಾನು ಎಲ್ಲವನ್ನೂ ನಮ್ಮ ಗುರುಗಳಿಗೆ ನಿವೇದಿಸಿ ಕೊಂಡೆ. "ರಾತ್ರಿವೇಳೆ ಪುನ್ನಾಗವ ರಾಳಿಯನ್ನು ಹಾಡಬಾರದೆಂದು ನಿನಗೆ

ತಿಳಿಸಿರಲಿಲ್ಲವೆ? ಅದು ಹೋಗಲಿ. ಇನ್ನು ಮುಂದೆ ನೀನೇನಾದರೂ ಕೊಳಲನ್ನು ಮುಟ್ಟಿದೆಯಾದರೆ ಮತ್ತೆ ನಾಗರಾಜನು ತಪ್ಪದೆ ಬರುತ್ತಾನೆ. ನೀನು ಮತ್ತೆ ಅದೇ ರಾಗವನ್ನೇ ಮರಳಿ ಮರಳಿ ಬಾರಿಸಿದ ಹೊರತು ನಿನ್ನನ್ನು ಸುಮ್ಮನೆ ಬಿಡುವುದಿಲ್ಲ. ಅದಕ್ಕೆ ನೀನು ಸಿದ್ಧವಾಗಿದ್ದೀಯೋ?" ಎಂದು ಕೇಳಿದರು ಅವರು.

"ಅಯ್ಯೋ, ಅಯ್ಯೋ, ನನ್ನ ಜನ್ಮಜನ್ಮಾಂತರಕ್ಕೂ ನಾನೊಲ್ಲೆ." ಎಂದು ನಾನು ಕೂಗಿಕೊಂಡೆ. ಆ ಹಾಡೆಂದರೆ ನನ್ನ ಮೈಯೆಲ್ಲ ಉರಿಯುತ್ತಿತ್ತು. ಸಾಯುವವರೆಗೆ ಹೇಳಬೇಕಾದಷ್ಟನ್ನು ಆ ದಿನವೊಂದರಲ್ಲೇ ಹೇಳಿಬಿಟ್ಟಿದ್ದೆ.

"ಹಾಗಾದರೆ, ನಿನ್ನ ಕೊಳಲನ್ನೆಸೆದು ನೀನು ಇದುವರೆಗೆ ಕಲಿತ ಸಂಗೀತವನ್ನೆಲ್ಲ ಮರೆತುಬಿಡು. ಹಾವಿನೊಡನೆ ಆಟ ಸಲ್ಲದು. ಅದು ದೇವ ದೇವತೆಗಳ ಆಟಿಕೆ. ನಿನ್ನ ಬಿದಿರಿನ ಕೊಳವೆಯನ್ನು ಒಲೆಗೆ ಹಾಕು. ಇನ್ನು ನಿನಗೂ ಅದಕ್ಕೂ ನಂಟತನವಿಲ್ಲ......." ಎಂದರು ಗುರುಗಳು. ಈ ಅಗಲಿಕೆಯನ್ನು ಸಹಿಸಲಾರದೆ ಕಣ್ಣೀರಿನ ಕೋಡಿ ಹರಿಸಿದೆ ನಾನು. ಆದರೇನಂತೆ? ಎಲ್ಲವೂ ನಿರರ್ಥಕ. ಗುರುಗಳು ನನ್ನ ಮೇಲೆ ಕರುಣೆಗೊಂಡು, "ಮತ್ತೆ ಆ ಭಿಕ್ಷುವನ್ನು ಕಂಡು ಆತನ ಕ್ಷಮೆ ಬೇಡಿದರೆ ಎಲ್ಲವೂ ಸರಿಹೋಗಬಹುದು. ಅವನನ್ನು ಹುಡುಕಬಲ್ಲೆಯೇನು?" ಎಂದರು.

ಕೊಳಲನ್ನು ತ್ಯಜಿಸಿದುದಾಯಿತು. ಕಂಡೂ ಕಾಣದ ಆ ಭಿಕ್ಷುಕರನ್ನು ಅಂದಿನಿಂದ ನಾನು ಅರಸುತ್ತಲೇ ಇದ್ದೇನೆ. ಇಂದೂ ಸರಿಯೆ, ಆತನೇನಾದರೂ ಈ ಭೂಮಿಯಲ್ಲಿ ನನಗೆ ಕಾಣಿಸಿಕೊಂಡನೆಂದರೆ ಆತನ ಪಾದದ ಬಳಿ ಬಿದ್ದು, ಅವನ ಕ್ಷಮೆಯನ್ನು ಬೇಡಿ, ಮತ್ತೆ ನನ್ನ ಕೊಳನ್ನು ಹಿಡಿಯುತ್ತೇನೆ.

# ಬಿಳಿಯ ಹೂವು

ಕೃಷ್ಣ ಅವಳನ್ನು ಮೊದಲು ನೋಡಿದುದು ಬೀದಿಯ ನಲ್ಲಿಯ ಹತ್ತಿರ. ಆ ದಿನದಿಂದ ಅವನನ್ನು ಬೀದಿಯ ನಲ್ಲಿಯ ಹತ್ತಿರ ನೋಡುವುದು ಅವಳಿಗೂ ವಾಡಿಕೆಯಾಗಿಬಿಟ್ಟಿತು. ನೇರವಾದ ಪ್ರೇಮ ಸಾಧ್ಯವಿರಲಿಲ್ಲ. ಅರ್ಥಗರ್ಭಿತವಾದ ಓರೆ ನೋಟದಲ್ಲೇ ನಿಲ್ಲಬೇಕಾಯಿತು ಅವರ ಪ್ರಣಯ. ಮದುವೆಯ ಮಾತಿನಲ್ಲಿ ಹುಡುಗನ ತಂದೆಯೇ ಮೇಲೆ ಬಿದ್ದು ಹೋಗುವಂತಿಲ್ಲ. ಬೀದಿಯನಲ್ಲಿಯ ಹತ್ತಿರವೇ ಅಳಿಯ ಬಿದ್ದಿರುತ್ತಾನೆ, ಎಂದುಬೇಕಾದರೂ ಆರಿಸಿಕೊಳ್ಳಬಹುದು ಎಂದು ಹುಡುಗಿಯ ತಂದೆಗೆ ಹೇಗೆ ಗೊತ್ತಾಗಬೇಕು ?

ಕಡೆಗೂ ಒಬ್ಬ ಮಧ್ಯಸ್ಥಗಾರರು ಸಿಕ್ಕಿದರು. ಆತ ಕೀಲು ತಿರುಗಿಸಿದರು. ಬರುವ ತಿಂಗಳಿಗೆ ಹುಡುಗಿಗೆ ಹದಿನಾಲ್ಕು ತುಂಬಿ ಹೋಗುವುದರಿಂದ ಅವಳ ತಂದೆಯೂ ವರಾನ್ವೇಷಣಕ್ಕೆ ತೊಡಗಲೇಬೇಕಾಗಿತ್ತು. ಕೃಷ್ಣನ ಅರ್ಹತೆಗಳೂ ಸಮರ್ಪಕವಾಗಿಯೇ ಇದ್ದುವು ; ಒಳ್ಳೆಯ ಸಂಬಂಧ, ಅನುಕೂಲಸ್ಥರ ಮನೆಯ ಹುಡುಗ, ಬಿ.ಎ ಯಲ್ಲಿ ಓದುತ್ತಿದ್ದಾನೆ........ಕೃಷ್ಣನ ತಂದೆತಾಯಿಗಳಿಗೆ ಹುಡುಗಿಯ ಅರ್ಹತೆಗಳೂ ಒಪ್ಪಿದುವು ; ಒಳ್ಳೆಯ ಸಂಬಂಧ, ಲಕ್ಷಣವಾಗಿದ್ದಾಳೆ, ಇಂಪಾಗಿ ಹಾಡುತ್ತಾಳೆ, ಲೋವರ್ ಸೆಕೆಂಡರಿವರೆಗೆ ಓದಿದ್ದಾಳೆ........

ಮಾತುಕತೆಗಳು ಈ ಘಟ್ಟಕ್ಕೆ ಬಂದಿದ್ದಾಗ, ಕೃಷ್ಣ ಹುಡುಗಿಯನ್ನು ಮೊದಲಿಗಿಂತ ಹೆಚ್ಚು ವಿಮರ್ಶಾತ್ಮಕ ದೃಷ್ಟಿಯಲ್ಲಿ ನೋಡತೊಡಗಿದ. ಆದರೆ. ಅವರ ದೃಷ್ಟಿಮಿಲನ ಕೇವಲ ಕ್ಷಣಮಾತ್ರದ ಸಂಗತಿಯಾಗಿತ್ತು. ಇಷ್ಟು ದಿವಸವಾದರೂ ಅವಳ ಬಣ್ಣವೇನು, (ಎಣ್ಣೆಗೆಂಪೋ, ಎಳೆಗುಲಾಬಿಯೋ), ಅವಳ ಮೂಗಿನ ಆಕಾರವೇನು—ಎಂಬ ಎರಡು ಮುಖ್ಯ ವಿಷಯಗಳ ಬಗ್ಗೆ ಅವನಿಗೆ ಯಾವುದೂ ಖಚಿತವಾಗಿ ತಿಳಿದೇ ಇರಲಿಲ್ಲ. ಕನ್ಯಾಪರೀಕ್ಷೆಯಲ್ಲಿ ಇವುಗಳು ಮುಖ್ಯವಾದ ಅಂಶಗಳು. ಇವೆರಡನ್ನೂ

ಕಂಡುಕೊಳ್ಳಬೇಕೆಂದು ಅವನು ಎಷ್ಟೋ ಪ್ರಯತ್ನ ಮಾಡಿದ್ದ . ಹೇಗಿದ್ದರೇ ನಂತೆ ? ಅದರಿಂದ ಯಾವ ವ್ಯತ್ಯಾಸವೂ ಆಗುತ್ತಿರಲಿಲ್ಲ....ಅವಳ ನೆನಪು ಸುಮಧುರ ಪರಿಮಳದಂತೆ ಅವನ ಸುತ್ತಲೂ ಪಸರಿಸಿತ್ತು. ಒಟ್ಟಿನ ಮೇಲೆ ಕೃಷ್ಣನಿಗೆ ಜೀವನ ಸುಖಮಯವಾಗಿ ಕಂಡಿತು.

ಒಂದು ದಿನ ಶುಭಲಗ್ನದಲ್ಲಿ ಹುಡುಗಿಯ ತಂದೆ ಕೃಷ್ಣನ ಮನೆಗೆ ಬಂದರು. ಕೃಷ್ಣ ಅವರನ್ನು ಎದುರುಗೊಂಡು, ಕುರ್ಚಿ ಕೊಟ್ಟ. ಕ್ಷೇಮ ಸಮಾಚಾರ ವಿಚಾರಿಸಿದ. ಅವನ ಕಾಥರವೇ ಕಾಥರ! ಮುಖವೆಲ್ಲ ಕೆಂಪೇರಿತ್ತು. ಎದೆ ಡವಡವಗುಟ್ಟುತ್ತಿತ್ತು. ಹೇಗೆ ನಡೆದುಕೊಳ್ಳಬೇಕೋ ತೋರದೆ ಹೋಯಿತು. ಯಾರ ಕೈ ಹಿಡಿಯಲು ಪ್ರಾಣವನ್ನೇ ಒಪ್ಪಿಸಲು ಸಿದ್ಧವಾಗಿದ್ದನೋ ಅವಳ ತಂದೆಗೆ ಅಷ್ಟೊಂದು ಸಮೀಪದಲ್ಲಿ ನಿಂತುಕೊಳ್ಳು ವುದು ಹೇಗೆ? ಕೃಷ್ಣನ ತಂದೆ ಆಗಂತುಕರನ್ನು ಆದರದಿಂದ ಮಾತಾಡಿಸಿದರು. ಇದನ್ನು ಕಂಡು ಕೃಷ್ಣನಿಗೆ ಅಪಾರವಾದ ಸಂತೋಷವಾಯಿತು. ಇನ್ನು ನಿಲ್ಲಬೇಕಾದುದಿವೆಲ್ಲೆಂದು ಮೆಲ್ಲನೆ ಮನೆಯೊಳಕ್ಕೆ ನುಸುಳಿಕೊಂಡ. ಹುಡು ಗಿಯ ತಂದೆ ಸ್ವಲ್ಪಕಾಲ ಬತ್ತದ ಧಾರಣೆ, ಭರಣಿಮಳೆ, ಮುನಿಸಿಪಲ್ ಚುನಾವಣೆ, ವಾರ್ಧಾ ಯೋಜನೆ ಇವುಗಳ ವಿಷಯವೆಲ್ಲ ಮಾತನಾಡಿ ಅನಂತರ ಒಂದು ಕಾಗದದ ಹಾಳೆಯನ್ನು ಜೇಬಿನಿಂದ ತೆಗೆದರು. ಕಾಗದದ ನಾಲ್ಕು ಮೂಲೆಗಳಿಗೂ ಕುಂಕುಮ ಸವರಿತ್ತು "ಇದು ನನ್ನ ಮಗಳ ಜಾತಕ. ನಮ್ಮಿಬ್ಬರ ಮನೆತನಗಳಿಗೂ ಸಂಬಂಧ ಬೆಳೆದುಬಂದರೆ ನಾನು ಪಾವನನಾದಂತೆಯೇಸರಿ.'' ಎಂದನು. "ನಾನೂ ಅಷ್ಟೆ" ಎಂದು ಕೃಷ್ಣನ ತಂದೆ ಹೇಳಿ, ಜಾತಕವನ್ನು ತೆಗೆದುಕೊಂಡರು.

"ತಮ್ಮ ಪುತ್ರನ ಜಾತಕ ಕೊಡೋಣವಾಗುತ್ತದೆಯೇ?"

"ಹ್ಞು, ನೋಡಿ—ಅದರಗೊಡವೆ ಬಿಟ್ಟರಾಗುವುದಿಲ್ಲವೆ? . ನನ ಗಂತೂ ಜಾತಕದಲ್ಲಿ ಸುತರಾಂ ನಂಬಿಕೆಯಿಲ್ಲ." ಎಂದರು ಕೃಷ್ಣನ ತಂದೆ. ಆದರೆ ಹುಡುಗಿಯ ತಂದೆ ಹಿಂದಿನ ಪದ್ಧತಿಯವರು. ಹುಡುಗನ ಜಾತಕ ಹುಡುಗಿಯ ಜಾತಕ ಕೂಡಿಬರುತ್ತದೆಯೆ ಎಂಬುದನ್ನು ಕಂಡುಕೊಳ್ಳದೆ ಹೆಜ್ಜೆಯನ್ನು ಮುಂದಿಡಲು ಸಿದ್ಧವಾಗಿರಲಿಲ್ಲ. ಮದುವೆಯೆಂಬುದು

ಕಣ್ಣುಕಟ್ಟಿಕೊಂಡು ಕತ್ತಲಲ್ಲಿ ಧುಮುಕಿದಂತೆ. ದಂಪತಿಗಳ ಆಯುಸ್ಸು, ಆರೋಗ್ಯ, ಸುಖಸಂತೋಷ ಇವೆಲ್ಲವನ್ನೂ ಗಣನೆಗೆ ತೆಗೆದುಕೊಳ್ಳದೆ ಹೋಗುವುದು ಸಾಧ್ಯವೇ? ಎರಡು ಜಾತಕ ಬೆರೆಸುವುದು, ಎರಡು ಗ್ರಹ ಗಳನ್ನು ಬೆರೆಸಿದಂತೆ; ಹೀಗಾದರೂ ಆಗಬಹುದು, ಹಾಗಾದರೂ ಆಗಬಹುದು.

ಕೆಲವು ದಿನ ಕಳೆದ ತರುವಾಯ, ಹುಡುಗಿಯ ತಂದೆ ಬಂದು ಕೃಷ್ಣನ ಜಾತಕದಲ್ಲಿ ಪ್ರಬಲವಾದ ದೋಷವಿದೆಯೆಂದು ತಿಳಿಸಿದರು. "ಅಂಗಾರಕನು ಏಳನೆಯ ಮನೆಯಲ್ಲಿದ್ದಾನೆ. ಆದುದರಿಂದ ಪತ್ನಿಗೆ ಅಲ್ಪಾಯುಸ್ಸು ಎಂದರ್ಥ." ಈ ಬಗೆಯ ದೋಷವನ್ನು ನಿರ್ಲಕ್ಷಿಸಿ ನಡೆಸಿದ ಮದುವೆಗಳಲ್ಲಿ, ವಿವಾಹ ಮುಗಿದ ಮೂರನೆಯ ದಿನವೇ ಹೆಣ್ಣು ತೀರಿಹೋದ ಕತೆಗಳೆಷ್ಟನ್ನೋ ಆತ ಉದಹರಿಸಿದರು. ತನ್ನ ಮಗಳ ಪ್ರಾಣವನ್ನು ಪರೀಕ್ಷೆಗೊಡ್ಡುವುದಕ್ಕೆ ಆತ ಸಮ್ಮತಿಸಲಿಲ್ಲ. ನಕ್ಷತ್ರಗಳೂ ಕಂದಾಚಾರವೂ ಸೇರಿ ತನ್ನ ಗತಿ ಪೂರೈಸಿದುವೆಂದು ಕೃಷ್ಣ ಕಂಬನಿಗರೆದ.

ಕೃಷ್ಣನ ತಂದೆ ಭಾರಿಯ ಜ್ಯೋತಿಷ್ಯರೊಬ್ಬರನ್ನು ವಿಚಾರಿಸಿ ಪ್ರತ್ಯುತ್ತರವನ್ನು ಸಜ್ಜುಗೊಳಿಸಿಕೊಂಡರು: ಭಾರ್ಯಾವಿನಾಶಕ ಗ್ರಹದ ಪ್ರಭಾವವೆಲ್ಲ ಕಳೆದುಹೋಗಿ ಈಗದು ನಿರ್ಬಲವಾಗಿಬಿಟ್ಟಿದೆ; ಒಂದು ವೇಳೆ ಹುಡುಗನೇನಾದರೂ ಐದು ವರ್ಷಗಳ ಹಿಂದೆ ಮದುವೆ ಮಾಡಿ ಕೊಂಡಿದ್ದಿದ್ದರೆ, ಮತ್ತೆ ಈಗ ಮದುವೆ ಮಾಡಿಕೊಳ್ಳಬೇಕಾಗುತ್ತಿತ್ತು–ಇತ್ಯಾದಿ. ಆಲೋಚಿಸಿ ನೋಡುತ್ತೇನೆಂದು ಭರವಸೆಯಿತ್ತು ಕನ್ಯೆಯ ತಂದೆ ಭರವಸೆಯಿತ್ತರು. ಮತ್ತೆ ತಮ್ಮ ಜೋಯಿಸರನ್ನು ವಿಚಾರಿಸಿ, "ಇಲ್ಲವಂತೆ, ಈ ಎರಡು ಜಾತಕಗಳನ್ನೂ ಒಟ್ಟಿಗೆ ಒಂದು ಲಕ್ಕೋಟೆಯಲ್ಲಿಡುವುದು ಕೂಡ ಕ್ಷೇಮವಲ್ಲವೆಂದು ಹೇಳಿದರು" ಎಂದು ವರದಿ ಒಪ್ಪಿಸಿದರು. ಹೆಂಡತಿ-ಕೊಲೆಗಾರನು ಕೇವಲ ನಿಶ್ಶಕ್ತನಾಗಿಬಿಟ್ಟಿದಾನೆ, ನಿಶ್ಶಕ್ತನಾದ ಅಂಗಾರಕನಿಗೆ ಹೆದರಿಕೊಳ್ಳುವುದು ಶುದ್ಧ ಹೇಡಿತನ, ಅಂಥ ಹೇಡಿತನವನ್ನು ಯಾರೂ ಕೇಳಿದ್ದಿಲ್ಲ—ಎಂದು ಕೃಷ್ಣನ ತಂದೆ ಹಟಹಿಡಿದರು. ಹುಡುಗಿಯ ತಂದೆಯ ಮನಸ್ಸಿನಲ್ಲು ಇದೇ ಭಾವನೆಯಿತ್ತು. ಒಂದುಕಡೆ ಈ ಸಂಬಂಧ ಬೆಳೆಸಬೇಕೆಂಬಾಸೆ, ಮತ್ತೊಂದುಕಡೆ ಅಂಗಾರಕನ

ಭಯ, ಎರಡರ ತುಯ್ದಾಟದಲ್ಲಿ ಯಾವುದನ್ನೂ ತೀರ್ಮಾನಿಸುವುದಕ್ಕಾಗ ಲಿಲ್ಲ ಆತನಿಗೆ. ಏನುಮಾಡಬೇಕೋ ತೋರಲಿಲ್ಲ. "ಈ ಬಗೆಯ ಸಮಸ್ಯೆ ಗಳನ್ನೆಲ್ಲ ಪೂರ್ವಿಕರು ದೈವೇಚ್ಛೆಗೆ ಬಿಟ್ಟುಬಿಡುತ್ತಿದ್ದರು, ನಾವೂ ಹಾಗೆಯೇ ಮಾಡಬಹುದಲ್ಲವೆ?'' ಎಂದು ಕೃಷ್ಣನ ತಂದೆ ಸೂಚಿಸಿದರು. ಕನ್ಯಾ ಪಿತೃ ಬಹಳ ಆತುರದಿಂದ ಈ ಸಲಹೆಯನ್ನು ಅಪ್ಪಿಕೊಂಡರು.

ವಾರದಲ್ಲೆಲ್ಲ ಶುಭದಿನವಾದ ಶುಕ್ರವಾರದ ಪ್ರಾತಃಕಾಲ ಅದೇವೇಳೆಗೆ ಊರಗುಡಿಯಲ್ಲಿ ಕೃಷ್ಣ, ಕೃಷ್ಣನ ತಂದೆ, ಹುಡುಗಿಯ ತಂದೆ ಮಧ್ಯಸ್ಥ ಗಾರರು ಇಷ್ಟು ಜನವೂ ಸೇರಿದ್ದರು. ಅರ್ಚಕ ಬಂದು ಶಕ್ತಿಗೆ ಒಡೆಯ ನಾದ ಆಂಜನೇಯ ದೇವರ ಮುಂದೆ ಎತ್ತರವಾದ ದೀಪಸ್ತಂಭವನ್ನು ಹೊತ್ತಿಸಿಟ್ಟು, "ಯಾರಾದರೂ ಪಕ್ಕದ ಮನೆಗೆ ಹೋಗಿ ಅವರ ಮಗು ವನ್ನು ಒಂದು ನಿಮಿಷ ಕಳುಹಿಸಬೇಕಂತೆ ಎಂದು ಹೇಳಿ ಬರುತ್ತೀರಾ?" ಮರುಗಳಿಗೆಯಲ್ಲೇ ಮುಖವೆಲ್ಲ ನಗುವಿನಿಂದ ತುಂಬಿದ ಐದು ವರ್ಷದ ವಸ್ತುವೊಂದು ಕುಪ್ಪಳಿಸಿಕೊಂಡು ಬಂತು. ಅವಳ ಕಪ್ಪುಕಣ್ಣುಗಳು ಕುತೂಹಲದಿಂದ ದುಂಡಗಾಗಿದ್ದುವು.

ಕತ್ತಲು ಮುಸುಕಿದ್ದ ಗರ್ಭಗುಡಿಯಲ್ಲಿ ಎಲ್ಲರೂ ನಿಂತರು. ತೆಂಗಿನ ಕಾಯಿ ಒಡೆದು ನೈವೇದ್ಯ ಮಾಡಿಯಾಯಿತು. ಬಾಳೆಹಣ್ಣು ಒಪ್ಪಿಸಿದ್ದಾ ಯಿತು. ಗಂಟೆ ಬಾರಿಸಿಕೊಂಡು ದೇವರ ಸುತ್ತ ಕರ್ಪೂರದ ಆರತಿ ಸುತ್ತಿ ಯಾಯಿತು. ಮಂಗಳಾರತಿಯ ಬೆಳಕಿನಲ್ಲಿ ಹೊಳೆಯುತ್ತಿದ್ದ ಪುಷ್ಪಾಲಂ ಕೃತ ಪ್ರತಿಮೆಗೆ ಕೈಮುಗಿದು ಕೃಷ್ಣನು "ದೇವರೇ, ನನ್ನ ಕಡೆಗೇ ತೀರ್ಪು ಕೊಡಪ್ಪಾ, ಅಂಗಾರಕನನ್ನು ಹುಲ್ಲುಕಡ್ಡಿಗಿಂತ ನಿಕೃಷ್ಟವಾಗಿ ಮಾಡಪ್ಪ, ಅದು ನಿರ್ಬಲವೆಂದು ಅರಿತುಕೊಳ್ಳುವಷ್ಟು ಬುದ್ಧಿಯನ್ನು ನಮ್ಮ ಮಾವ ನವರ ಮಿದುಳಿಗೆ ತುಂಬಪ್ಪಾ'' ಎಂದು ಪ್ರಾರ್ಥಿಸಿಕೊಂಡ.

ಬತ್ತಿಯ ಕುಡಿಯಿಂದ ಐದಾರು ಕಿಡಿಗಳು ಹಾರಿದುವು. ಹಿರಿಯರು ಒಬ್ಬರಕಡೆ ಇನ್ನೊಬ್ಬರು ನೋಡಿ "ಆ! ಎಂಥ ಒಳ್ಳೆಯ ಶಕುನ!" ಎಂದು ಪಿಸುಗುಟ್ಟಿಕೊಂಡರು.

ದೇವರು ತನ್ನ ತೀರ್ಪನ್ನು ಕೊಡುವಸಮಯ ಬಂತು. ದೇವರಿಗೆ ತೊಡಿಸಿದ್ದ ಹಾರದಿಂದ ಬಿಳಿಯದೊಂದು ಕೆಂಪುದೊಂದು ಹೂವನ್ನು ಆರಿಸಿ

ಗರ್ಭಗುಡಿಯು ಹೊಸಿಲಮೇಲಿಟ್ಟು, ಪೂಜಾರಿಯು ಮಗುವನ್ನು ಕರೆದು, "ನಿನಗೊಂದು ಬಾಳೆಹಣ್ಣು ಬೇಕೇನಮ್ಮಾ?'' ಎಂದು ಕೇಳಿದರು.

ಅದರಲ್ಲೇನು ಸಂದೇಹ?

"ಸರಿ ಹಾಗಾದರೆ, ಇಲ್ಲಿ ಹೊಸಲಿನ ಮೇಲೆ ಎರಡು ಹೂವಿದೆಯಲ್ಲ, ಅದರಲೊಂದನ್ನೆತ್ತಿ ನನ್ನ ಕೈಗೆ ಕೊಡಮ್ಮ'' ಎಂದ ಪೂಜಾರಿ.

"ಇನ್ನೊಂದು?" ಎಂದಳು ಹುಡುಗಿ.

"ಒಂದೇ ಒಂದು ಎತ್ತಿಕೊಳ್ಳಬೇಕು."

"ಅದೇಕೆ?"

"ದೇವರಿಗೆ ಒಂದೇಹೂವು ಸಾಕಂತೆ. ನೀನು ಎತ್ತಿಕೊಡು ನಿನಗೆ ಬಾಳೆಹಣ್ಣು ಕೊಡುತ್ತೇನೆ."

ಮಗು ಒಂದು ಗಳಿಗೆ ಹೂವುಗಳ ಕಡೆಯೇ ನೋಡುತ್ತ ನಿಂತಿದ್ದಳು. ತಾನು ನಿರ್ವಹಿಸಬೇಕಾಗಿದ್ದ ಪಾತ್ರದ ಮಹತ್ವ ಅವಳಿಗೇನುಗೊತ್ತು? ಅವಳೀಗ ದೇವರಿಗೂ ಮನುಷ್ಯರಿಗೂ ನಡುವಣ ರಾಯಭಾರಿ. ತಾನೊಪ್ಪಿದ ಹೆಣ್ಣನ್ನು ಕೃಷ್ಣನು ವರಿಸಬಹುದೋ ಕೂಡದೋ ಎಂಬ ವಿಷಯದಲ್ಲಿ ದೇವರ ತೀರ್ಮಾನವನ್ನು ಮನುಷ್ಯ ಸಾಮಾನ್ಯನಿಗೆ ತಿಳಿಸುವ ದೇವಪ್ರತಿನಿಧಿ. ಆದರೆ ಅವಳಿಗೆ ಇದೇನು ಗೊತ್ತು? ಬಿಳಿಯ ಹೂವಾದರೆ ಹೌದು, ಕೆಂಪು ಹೂವಾದರೆ ಅಲ್ಲ.

ಎಲ್ಲರೂ ಉಸಿರನ್ನು ಬಿಗಿಹಿಡಿದುಕೊಂಡು ಕಾದಿದ್ದರು. ಹೂವನ್ನು ಎತ್ತಿಕೊಳ್ಳಲು ಮಗು ಬಾಗಿದಳು. ಶ್ರಮವನ್ನು ಭರಿಸಲಾರದೆ ಕೃಷ್ಣ ಬಲವಾಗಿ ಕಣ್ಣು ಮುಚ್ಚಿಕೊಂಡುಬಿಟ್ಟ. ತೆರೆದು ನೋಡಿದಾಗ ಗರ್ಭಗುಡಿಯ ಹೊಳೆಹೊಳೆದ ಹಿತ್ತಾಳೆಯ ಹೊಸಲಿನ ಮೇಲೆ ಬಿಳಿಯ ಹೂವು ಒಂಟಿಯಾಗಿ ಕುಳಿತಿತ್ತು. ಹಿರಿಯರು ವಿಗ್ರಹದ ಕಡೆ ನೋಡುತ್ತ "ಯಾವುದು ಒಳ್ಳೆಯದೆಂದು ಅವನಿಗೇ ಗೊತ್ತು" ಎಂದರು. ಬಹುಕಾಲ ಕೃಷ್ಣನ ಬುದ್ಧಿಗೆ ಮಂಕು ಹಿಡಿದುಬಿಟ್ಟಿತು. ಚೇತರಿಸಿಕೊಂಡೊಡನೆ, ಜಗತ್ತಿನಲ್ಲಿರುವ ಎಲ್ಲ ಹೂಗಳನ್ನೂ ಬಿಳಿಯ ಬಣ್ಣಕ್ಕೆ ತಿರುಗುವ ಶಕ್ತಿ ತನಗಿದ್ದಿದ್ದರೆ! ಎಂಬುದಾಗಿ ಹಂಬಲಿಸಿದ.

# ಒಡೆದ ಮಡಕೆ

ಗೋಡೆಯಲ್ಲಿದ್ದ ಬಿರುಕಿನ ಮೂಲಕ ಸೂರ್ಯನ ಕಿರಣವೊಂದು ಬಂದು ಮುರುಗನ ಕಣ್ಣನ್ನು ಚುಚ್ಚಿತು. ಅವನು ಕಣ್ಣು ತೆರೆದು ಬಹಳಕಾಲ ಹಾಗೆಯೇ ಬಿದ್ದುಕೊಂಡಿದ್ದ. ಮೈಯೆಲ್ಲ ಹಗುರವಾಗಿ ತೋರುತ್ತಿತ್ತು. ಲವಲವಿಕೆಯಾಗಿಲ್ಲದಿದ್ದರೂ ಮೈಯ್ಯಿ ಹಗುರವಾಗಿತ್ತು. ಅನೇಕ ಗಂಟೆಗಳ ಕಾಲ ಹೊಟ್ಟೆಗೆ ಏನೂ ಬೀಳದಿದ್ದರೆ ಯಾವ ಬಗೆಯಲ್ಲಿ ಮೈಯ್ಯಿ ಹಗುರವಾಗುತ್ತದೆಯೋ ಹಾಗೆ ಹೊಕ್ಕಳಿನ ಬಳಿ ಒಂದು ರೀತಿಯ ಉರಿತಲೆ ಸುತ್ತುತ್ತಿತ್ತು. ಏಳಬೇಕಾದುದಾದರೂ ಏಕೆ ಎಂದು ಯೋಚಿಸುತ್ತ ಮುರುಗ ಮಲಗಿಕೊಂಡೇ ಇದ್ದ. ಹಗಲು, ಸಂಜೆ, ರಾತ್ರಿ, ನಿದ್ದೆ. ಮತ್ತೆ ಮೂರನೆಯ ದಿನ. ಆ ಮುರುದಿನವನ್ನು ತಪ್ಪಿಸಿಕೊಳ್ಳುವಂತಿರಲಿಲ್ಲ. ಅದನ್ನು ಎದುರಿಸಲೇ ಬೇಕು. ಬಹುಹಿಂದೆ ಎಂದೋ ಒಂದು ಮಧ್ಯಾಹ್ನ ಊಟ ಮಾಡಿದ್ದ ಹಾಗೆ ನೆನಪು. ನಿಜವಾಗಿ ನೋಡಿದರೆ ಅಷ್ಟೇನೂ ಕಾಲ ಕಳೆದಿರಲಿಲ್ಲ. ಮೂರೇಮೂರು ದಿನವಾಗಿತ್ತು. ಅಷ್ಟೆ. ತೆಂಗಿನತೋಪಿನ ಆಳು ಒಂದು ಸ್ವಲ್ಪ ಅನ್ನ, ಒಂದು ತೆಂಗಿನ ಕರಟದ ತುಂಬ ಮಜ್ಜಿಗೆ ಕೊಟ್ಟಿದ್ದ ಅಂದು.

ಆರು ತಿಂಗಳ ಹಿಂದೆ ಮುರುಗನು ಯಾವುದೋ ಹಣಕಾಸಿನ ತೊಡಕಿನಲ್ಲಿ ಸಿಕ್ಕಿಹಾಕಿಕೊಂಡಿದ್ದ. ಬೇರೆಯವರ ಹಣ. ಊರ ಪಂಚಾಯಿತಿಯವರು ಮುರುಗನಿಗೆ ವಿರೋಧವಾಗಿ ತೀರ್ಮಾನಮಾಡಿದರು. ಅದರ ಫಲವಾಗಿ ಮುರುಗನ ಆಸ್ತಿಯೆಲ್ಲ ಹೋಯಿತು. ಜತೆಗೆ ಒಳ್ಳೆಯ ಹೆಸರೂ ಹೋಯಿತು. ಪಂಚಾಯಿತಿಯ ತೀರ್ಪು ಬಂದಮೇಲೆ ಹಳ್ಳಿಯ ಒಕ್ಕಲಿಂದ ಅವನಿಗೆ ಬಹಿಷ್ಕಾರವಾದಂತೆಯೆ. ಬಹಿಷ್ಕಾರ ಎಂದು ಅವರೇನೂ ಹೆಸರಿಟ್ಟಿರಲಿಲ್ಲ. ಆದರೆ ಜನ ಅವನೊಡನೆ ಬೆರೆಯುತ್ತಿರಲಿಲ್ಲ. ದೂರವಾಗಿರುತ್ತಿದ್ದರು. ಮೂರೇಮೂರು ಜನ ಮಾತ್ರ ಇನ್ನೂ ಇವನ ಕೈ ಬಿಡದಿದ್ದುದು: ಹೆಂಡತಿ, ಆ ತೆಂಗಿನ ತೋಪಿನ ಆಳು, ಮತ್ತು ಅಣ್ಣಾಕಣ್ಣ ತೆಂಗಿನ

ತೋಪಿನ ಆಳಿಗೆ ಇವನನ್ನು ಕಂಡರೆ ಬಹಳ ಕನಿಕರ. ಬೇರೆ ಯಾರೂ ನೋಡದೆ ಇದ್ದಾಗ ಏನಾದರೂ ತನ್ನ ಕೈಲಾದ ಸಹಾಯ ಮಾಡುವನು. ಅಣ್ಣನ ಸ್ಥಿತಿ ಇಮ್ಮಡಿಯಾಗಿ ಕಷ್ಟವಾಗಿತ್ತು. ಹಳ್ಳಿಯವರಿಗೆ ತಿಳಿಯದೆ ತಮ್ಮನಿಗೆ ಸಹಾಯಮಾಡುವುದಿರಲಿ, ತನ್ನ ಹೆಂಡತಿ ಕಾಳಿಗೂ ತಿಳಿಯದಂತೆ ಸಹಾಯಮಾಡಬೇಕು. ಕಣ್ಣನು ಕಾಳಿಯನ್ನು ಮದುವೆ ಮಾಡಿಕೊಂಡ ಮೇಲೆಯೇ ಅಣ್ಣತಮ್ಮಂದಿರು ಬೇರೆಯಾದುದು. ಅಂದು ಗ್ರಾಮದವರಿಗೆಲ್ಲ ಆಶ್ಚರ್ಯ. ಒಂದು ಅಮಾವಾಸ್ಯೆಯಿಂದ ಇನ್ನೊಂದು ಅಮಾವಾಸ್ಯೆಯ ವರೆಗೆ ಒಂದು ತಿಂಗಳು ಅನಾಮತ್ತು ಹಳ್ಳಿಯವರೆಲ್ಲ ಅದೇ ಮಾತನ್ನೇ ಆಡುತ್ತಿದ್ದರು.

ಬಹಿಷ್ಕಾರಬೀಳುವ ಮುಂಚೆ ಮುರುಗನೂ ಅವನ ಹೆಂಡತಿಯೂ ಅನುಕೂಲವಾಗಿಯೇ ಇದ್ದರು. ಶೇಕದಾರರ ಮನೆಯಲ್ಲಿ ಪಾತ್ರೆ ತೊಳೆಯುವುದು, ಕಾಳು ಬೀಸುವುದು ಈ ಮೂಲಕ ಲಕ್ಷ್ಮಿ ಒಂದಷ್ಟು ಹಣ ತರುತ್ತಿದ್ದಳು. ಮುರುಗನಿಗೆ ಗದ್ದೆಗಳಲ್ಲಿ ತಪ್ಪದೆ ಕೆಲಸ ಸಿಗುತ್ತಿತ್ತು. ಆದರೆ ಪಂಚಾಯಿತಿಯ ತೀರ್ಮಾನವಾದ ಮೇಲೆ ಶೇಕದಾರರ ಮನೆಯವರು, "ಪಾತ್ರೆಗಳನ್ನೇನೂ ತೊಳೆಯಬೇಕಾಗಿಲ್ಲ, ಬೀಸುವುದಕ್ಕೇನೂ ಕಾಳಿಲ್ಲ" ವೆಂದು ಲಕ್ಷ್ಮಿಗೆ ಹೇಳಿಬಿಟ್ಟರು. ನೀನು ಬರದೆಹೋದರೂ ಪರವಾಯಿಲ್ಲ, ಪೈರು ಬೆಳೆಯುತ್ತಿದೆ ಎಂದು ಜಮೀನ್ದಾರರು ಮುರುಗನಿಗೆ ತಿಳಿಸಿಬಿಟ್ಟರು. ಇದಾದಮೇಲೆ ಇವರಿಗೆ ಉಪವಾಸವೇ ವ್ರತವಾಯಿತು. ಮುರುಗನ ಜತೆಗೆ ಲಕ್ಷ್ಮಿ, ಲಕ್ಷ್ಮಿಯ ಜತೆಗೆ ಮುರುಗ.

ಈ ಹಗಲಂತೂ ಮುರುಗನಿಗೆ ಏನೂ ದಾರಿ ತೋರಲಿಲ್ಲ. ಈಚಲ ಚಾಪೆಯ ಮೇಲೆ ಮಲಗಿದ್ದವನು ಒಂದುಸಲ ಕಣ್ಣನ್ನು ಹೊರಳಿಸಿ ತಮ್ಮ ಗುಡಿಸಿಲೆಲ್ಲವನ್ನೂ ನೋಡಿದ. ಮಣ್ಣಿನ ಮಡಕೆಗಳು, ಹಿತ್ತಾಳೆಯ ಒಂದೆರಡು ಪಾತ್ರೆಗಳು ಬೋರಲಿಸಿರುವುದು ಕಣ್ಣಿಗೆಬಿತ್ತು. ಪಕ್ಕದಲ್ಲಿ ಮಲಗಿದ್ದ ಹೆಂಡತಿಯನ್ನು ಮೊಣಕೈಯಿಂದ ತಿವಿದು, "ಲಕ್ಷ್ಮೀ, ಮೂಲೆಯಲ್ಲಿದೆಯಲ್ಲ ಮಡಕೆಗಳು ಪಾತ್ರೆಗಳು, ಅವನ್ನು ನೋಡಿದರೆ ನಿನಗೇನು ನೆನಪಾಗುತ್ತದೆ ಹೇಳು" ಎಂದು ಕೇಳಿದ.

" ಏನೋ ನನಗೆ ತಿಳಿಯದು '' ಎಂದಳು ಅವಳು.

" ನಿನ್ನ ಜ್ಞಾಪಕಶಕ್ತಿಗೆ ಬೆಂಕಿಹಾಕ. ನಿಮ್ಮ ತಂದೆ ಒಂದು ಪದ ಹಾಡುತ್ತ ಇದ್ದರಲ್ಲ,—

ಅನ್ನದಾ ಮಡಕೆಯೂ ಪಳಪಳನೆ ಹೊಳೆಯುತ್ತ
ಬಿದ್ದುಕೊಂಡಿದ್ದರೇ ಬೋರಲಾಗೀ
ಓಡೋಡಿ ಬರುವಳೂ ಮೂಲೆಯ ಮೂದೇವಿ
ಕತ್ತೇ ಸವಾರಿಯನು ಮಾಡಿಕೊಂಡೂ

ಆ ಪದ ನಿನಗೆ ನೆನಪಾಗುವುದಿಲ್ಲ ? ''

" ಅವಳು ಬಂದು ಎಷ್ಟೋದಿನವಾಯಿತು, ಬಿಡಿ. ನಮ್ಮ ಮನೆಗೆ ಅವಳು ಪಳಗಿಹೋಗಿದ್ದಾಳೆ.'' ಎಂದಳು ಲಕ್ಷ್ಮಿ.

ಬೆಳಗ್ಗೆ ಏಳುತ್ತಲೇ ಹೀಗೆ ಹಾಸ್ಯದ ಚಿಮುಕಿಗಳನ್ನು ಹಾರಿಸಿ, ಇಬ್ಬರೂ ಊರ ಕೆರೆಗೆ ಹೋಗಿ ನೀರು ಕುಡಿದರು. ಆ ವೇಳೆಗೆ ಸರಿಯಾಗಿ ಕಣ್ಣ ಅತ್ತಕಡೆ ಹಾದುಹೋಗುತ್ತಿದ್ದ. ಒಂದು ನಿಮಿಷ ನಿಂತು ಅವರ ಕಡೆಯೇ ನೋಡಿ ಮುಂದೆ ಹೊರಟುಹೋದ.

ಬೆಳಿಗ್ಗೆ ಆ ವೇಳೆಗೇ ಅವರಿಬ್ಬರೂ ನೀರು ಕುಡಿಯುತ್ತಿದ್ದುದೇಕೆಂದು ಅವನಿಗೆ ಅರ್ಥವಾಯಿತು. ಮನಸ್ಸು ಕಲಕಿತು. ಮನೆಗೆ ಹೋದ. ತಮ್ಮನಿಗೆಂದು ಒಂದು ಸೇರು ಅಕ್ಕಿಯನ್ನು ಅಳತೆಮಾಡುತ್ತೇನೆಂದು ನಿಶ್ಚಯ ಮಾಡಿಕೊಂಡ. ಆದರೆ ಅಷ್ಟುಹೊತ್ತಿಗೆ ಸರಿಯಾಗಿ ಸೊಂಟದಲ್ಲೊಂದು ನೀರಿನ ಕೊಡವನ್ನು ಇರುಕಿಕೊಂಡು ಕಾಳಿ ಬಂದುದನ್ನು ನೋಡಿ ಒಂದು ಗಳಿಗೆ ತಡೆದ. ನಗುವುದಕ್ಕೆಂದು ಪ್ರಯತ್ನಿಸಿದ. ಆದರೆ ಇದೊಂದನ್ನೂ ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಅವಳು ಮುಂದೆ ಸಾಗಿದಳು. ಅವಳು ಕೆರೆಗೆ ಹಿಂದಿರುಗುವವರೆಗೆ ಕಣ್ಣ ಕಾದಿದ್ದ. ಬಾಗಿಲಬಳಿಗೆ ಓಡಿಹೋಗಿ ಅವಳು ಹೋಗುವುದನ್ನೇ ನೋಡುತ್ತಿದ್ದ ಅವಳು ಕೆರೆಯ ಕಡೆ ಹೋಗುವ ಸಂದು ತಿರುಗಿದೊಡನೆ ಮನೆಯೊಳಕ್ಕೆ ಮತ್ತೆ ಬಂದ. ದೊಡ್ಡ ಕೊಪ್ಪರಿಗೆಯ ಮುಚ್ಚಳ ತೆಗೆದು, ತುಕ್ಕುಹಿಡಿದ ಸೇರನ್ನು ಅದರೊಳಕ್ಕೆ ಇಳಿಯಬಿಟ್ಟು ಒಂದು ಸೇರು ಅಕ್ಕಿಯನ್ನು ಅಳೆದ. ತನ್ನ ವಸ್ತ್ರವನ್ನು ಹರಡಿ, ಅದರೊ

ಳಕ್ಕೆ ಆ ಅಕ್ಕಿಯನ್ನು ಸುರಿದು ಒಂದು ಸಣ್ಣ ಅಚ್ಚುಕಟ್ಟಿನ ಗಂಟು ಕಟ್ಟಿದ. ಮುಚ್ಚಳವನ್ನು ಮತ್ತೆ ಕೊಪ್ಪರಿಗೆಯ ಮೇಲಿಟ್ಟು ಸರಸರನೆ ಹೊರಬಿದ್ದ.

ತಮ್ಮನ ಮನೆಯೊಳಕ್ಕೆ ಹೋದ. ತಮ್ಮನೂ ಅವನ ಹೆಂಡತಿಯೂ ಕುಳಿತಿದ್ದರು. ಗಂಟನ್ನು ಕೆಳಗಿರಿಸಿ, "ಇಲ್ಲೊಂದು ಸೇರು ಅಕ್ಕಿ ಇದೆ. ಪಳನಿಯ ದೇವರು ನಿಮ್ಮ ಮೇಲೆ ದಯೆತೋರಿಸಿದರೆ, ಈ ಅಕ್ಕಿಯನ್ನು ಹಿಂದಕ್ಕೆ ಕೊಡುವಿರಂತೆ. ಅದುವರೆಗೆ ಚಿಂತಿಸಬೇಡಿ. ಒಳ್ಳೆಯದಾಗಲಿ" ಎಂದು ಹೇಳಿ, ಅಕ್ಕಿಯನ್ನು ಒಂದು ಮಣ್ಣಿನ ಹರವಿಯ ಮೇಲೆ ಸುರಿದು ಹೊರಗೆ ಬಂದುಬಿಟ್ಟ. ಅವನು ಹೊರಟುಹೋದಮೇಲೆ ಲಕ್ಷ್ಮಿ ಕಣ್ಣೀರು ಸುರಿಸಿದಳು. ಮುರುಗ ನೆಲದ ಕಡೆಯೇ ದಿಟ್ಟಿಸಿನೋಡುತ್ತ ಗಂಭೀರವಾಗಿ ಕುಳಿತಿದ್ದ.

ಮುರುಗ ಮೇಲಕ್ಕೆದ್ದು, "ಲಕ್ಷ್ಮಿ, ಒಲೆಯನ್ನು ಹೊತ್ತಿಸಿ ಅನ್ನ ಮಾಡು. ದೇವರೇ ನಮಗಿದನ್ನು ಕಳುಹಿಸಿದ್ದಾನೆ. ನೀನು ಅಡಿಗೆಮಾಡು. ನಾನು ಆ ವೇಳೆಗೆ ಒಂದಷ್ಟು ಓಡಾಡಿಕೊಂಡು ಬರುತ್ತೇನೆ. ಹಿಂದಕ್ಕೆ ಬರುವವೇಳೆಗೆ ಇನ್ನು ಚೆನ್ನಾಗಿ ಹಸಿವಾಗಿರುತ್ತದೆ. ಚೆನ್ನಾಗಿ ಕವಳ ಕತ್ತರಿಸಬಹುದು" ಎಂದ.

"ಹಸಿವಾಗುವುದಕ್ಕೆ ಓಡಾಡಬೇಕೇ?" ಎಂದು ಕೇಳಿ ಲಕ್ಷ್ಮಿ ಗಹಗಹಿಸಿ ನಕ್ಕಳು.

ಒಲೆಯ ತುಂಬ ಜಿರಳೆಗಳು, ಹಲ್ಲಿಗಳು, ಜೇಡಗಳು ಸೇರಿದ್ದುವು. ಆ ಕಸವನ್ನೆಲ್ಲ ತೆಗೆದು, ಸಗಣಿಯನ್ನು ಸಾರಿಸಿ, ಸೌದೆಯ ಕಡ್ಡಿಗಳನ್ನು ಆಯ್ದು ತರುವುದಕ್ಕೆಂದು ಲಕ್ಷ್ಮಿ ಹೊರಟಳು. ಯಾವುದೋ ಒಂದು ಹಾಡು ಮನಸ್ಸಿನಲ್ಲಿ ಓಡಾಡುತ್ತಿತ್ತು. ಅನ್ನ ಬೇಯಿಸುವ ಮಡಕೆಯನ್ನು ಎತ್ತಿಕೊಳ್ಳುತ್ತ ಲಕ್ಷ್ಮಿ ತನಗೆ ತಾನೇ ಮುಟಗುಟ್ಟಿಕೊಂಡಳು.

ಅನ್ನದಾ ಮಡಕೆಯೂ ಪಳಪಳನೆ ಹೊಳೆಯುತ್ತ
ಬಿದ್ದುಕೊಂಡಿದ್ದರೇ ಬೋರಲಾಗಿ

ಓಡೋಡಿ ಬರುವಳೂ ಮೂಲೆಯಾ ಮೂದೇವಿ
ಕತ್ತೇ ಸವಾರಿಯನು ಮಾಡಿಕೊಂಡೂ

ಕೆರೆಗೆ ಹೋಗಿ, ಯಾರಿಗೂ ಕಾಣದಂತೆ ಆ ಮಡಕೆಯನ್ನು ಬೆಳಗಿ, ನೀರು ತುಂಬಿಕೊಂಡು ಮನೆಗೆ ತಂದಳು. ಒಲೆ ಉರಿಹಾಕಿ, ಮಡಕೆಯನ್ನು ಅದರ ಮೇಲಿಟ್ಟಳು. ಇನ್ನೂ ಆ ಹಾಡು ಹಾಗೆಯೇ ಅವಳ ಮನಸ್ಸಿನಲ್ಲಿ ಓಡಾಡುತ್ತಲೇ ಇತ್ತು.

ಈ ವೇಳೆಗೆ ಕಾಳಿ ತನ್ನ ಮನೆಗೆ ಹಿಂದುರಿಗಿ, ನೆಲದ ಮೇಲೆ ಚೆಲ್ಲಿದ್ದ ಅಕ್ಕಿಯ ಕಾಳನ್ನು ನೋಡಿದಳು. ಕೊಪ್ಪರಿಗೆಯವರೆಗೆ ಸಾಲಾಗಿ ಕಾಳು ಬಿದ್ದಿದ್ದುದು ಅವಳಿಗೆ ಕಾಣಿಸಿತು. ತುಕ್ಕುಹಿಡಿದ ಸೇರನ್ನು ಅವಳು ಯಾವಾಗಲೂ ಕೊಪ್ಪರಿಗೆಯೊಳಗೇ ಇಟ್ಟಿರುವುದು ವಾಡಿಕೆ. ಈಗ ಅದು ನೆಲದಮೇಲಿತ್ತು. ಸ್ವಲ್ಪಹೊತ್ತು ಅದನ್ನೇ ನೋಡಿ ತುಟಿ ಕಚ್ಚಿಕೊಂಡಳು. ಈ ಬಗೆಯ ಕೆಲಸ ಹಿಂದೆ ಕೆಲವುಸಲ ನಡೆದಿತ್ತು. ಅವಳಿಗೆ ಗೊತ್ತಾಯಿತು. ಮತ್ತೆ ಕೆರೆಯ ಕಡೆ ಹೋದಳು, ಕಡೆಯ ಬಿಂದಿಗೆ ನೀರು ತರುವುದಕ್ಕೆ ಬಂದು, ಬಿಂದಿಗೆಯನ್ನಿಳಿಸಿ ತೋಳುಗಳನ್ನು ಸ್ವಲ್ಪ ಸವರಿಕೊಂಡಳು. ಒಂದುಸಲ ಮೈಯ್ಯನ್ನೆಲ್ಲ ಕುಲುಕಿಕೊಂಡು, ಸೀರೆಯ ನೆರಿಗೆಯನ್ನು ಸರಿಮಾಡಿಕೊಂಡು ಹೊರಟಳು.

ನೀರು ಕುದಿಯ ತೊಡಗಿತ್ತು. ಲಕ್ಷ್ಮಿ ಅಕ್ಕಿಯನ್ನು ಅದರೊಳಗೆ ಸುರಿಸಿದಳು. ಅದು ಕುದಿಯುವುದನ್ನೇ ನೋಡುತ್ತ ಒಲೆಯ ಮುಂದೆ ಕುಳಿತಿದ್ದಳು. ಬಾಗಿಲು ತಟ್ಟಿದ ಸದ್ದಾಯಿತು. ಹೋಗಿ ಬಾಗಿಲು ತೆಗೆದಳು. ಹೊರಗಡೆ ವಾರಗಿತ್ತಿ ನಿಂತಿದ್ದಳು. ಕಾಳಿಯು ಮೈ ಬಣ್ಣ ಕಪ್ಪಗಿದ್ದರೂ ಮುಖದಲ್ಲಿ ಕೋಪ ಎದ್ದು ಕಾಣುತ್ತಿತ್ತು. ಲಕ್ಷ್ಮಿಗೆ ಬುದ್ಧಿ ತೋಚದೆ ಕೊಂಚಹೊತ್ತು ಮಾತೇ ಇಲ್ಲದೆ ನಿಂತಿದ್ದಳು. ಆ ಮೇಲೆ ಸತ್ವವೇ ಇಲ್ಲದ ದನಿಯಿಂದ " ಬಾಮ್ಮ ಒಳಗೆ " ಎಂದಳು.

ತುಡು ಕಚ್ಚಿಕೊಂಡು ಕಾಳಿ ಒಳಗೆ ಬಂದಳು. ಲಕ್ಷ್ಮಿಯನ್ನು

ತಲೆಯಿಂದ ಕಾಲಿನವರೆಗೆ ನೋಡಿ "ಬಡತನದಲ್ಲಿ ಬಿದ್ದಿರುವ ಭಿಕಾರಿಗಳು" ಎಂದು ಬುಸಗುಟ್ಟಿದಳು, ಒಲೆಯ ಮೇಲೆ ಕುದಿಯುತ್ತಿದ್ದ ಅಕ್ಕಿಯನ್ನು ತೋರಿಸಿ "ಇದು ಯಾರ ಅಕ್ಕಿ?" ಎಂದು ಕೇಳಿದಳು.

"ಯಾರ ಅಕ್ಕಿ!"

"ಹೂ, ಮಡಿಕೆಯಲ್ಲಿ ಕುದಿಯುತ್ತಿದೆಯಲ್ಲ, ಆ ಅಕ್ಕಿಯನ್ನು ನಿನಗೆ ಯಾರು ಕೊಟ್ಟರು? ದೇವರೇ ನಿಮ್ಮನ್ನು ಕೈಬಿಟ್ಟಿರುವಾಗ ಅಕ್ಕಿಯೆಲ್ಲಿಂದ ಬಂತು?"

"ಅಯ್ಯೋ ಅಕ್ಕಾ! ಏನೇನೋ ಮಾತಾಡುತ್ತಿಯಲ್ಲೇ?" ಎಂದು ಲಕ್ಷ್ಮಿ ಗೋಳಿಟ್ಟಳು. "ಇದು ನನ್ನ ಅಕ್ಕಿ" ಎಂದು ಬಲವಾಗಿ ಕಿರಿಚಿದಳು ಕಾಳಿ. ಹಾಗೆ ಹೇಳಿ, ಮಡಕೆಯನ್ನು ಒಲೆಯಿಂದ ಎತ್ತಿ ಬಲವೆಲ್ಲಾ ಬಿಟ್ಟು ನೆಲದ ಮೇಲೆ ಝಾಡಿಸಿ ಕುಕ್ಕಿದಳು.

ಲಕ್ಷ್ಮಿ ಮರದಂತೆ ನಿಂತಿದ್ದಳು. ಕಾಳಿ ಬಹಳ ಸಂತೋಷದಿಂದ "ನೆಲವನ್ನು ನೆಕ್ಕಿ ಈಗ........ಈಗ ನನ್ನ ಬೆನ್ನು ತಿರುಗಿತೆಂದರೆ ಸಾಕು, ನೆಲವನ್ನು ನೆಕ್ಕದೆ ಇರುತ್ತೀರಾ?" ಎಂದು ಹೇಳಿ, ಬಾಗಿಲನ್ನು ಬಲವಾಗಿ ಬಡಿದು, ಹೊರಟುಹೋದಳು. ಲಕ್ಷ್ಮಿ ಎಚ್ಚೆತ್ತುಕೊಂಡು, ಬಾಗಿಲವರೆಗೂ ಓಡಿಹೋಗಿ, "ಪ್ರಪಂಚದಲ್ಲೆಲ್ಲ ನಿನ್ನಂಥ ಮಾರಿ, ನಿನ್ನಂಥ ಪಿಶಾಚಿ ಇನ್ನೊಬ್ಬಳಿಲ್ಲ" ಎಂದು ಕೂಗಿಕೊಂಡಳು. ಒಳಗೆ ಬಂದು, ಮಡಕೆಯ ಚೂರುಗಳನ್ನೂ, ಮೆತ್ತಗಾಗಿದ್ದ ಅಗುಳುಗಳನ್ನೂ, ಅವುಗಳಿಂದ ಏಳುತ್ತಿದ್ದ ಹಬೆಯನ್ನೂ ನೋಡುತ್ತ ಕೆಲವು ನಿಮಿಷ ನಿಂತುಕೊಂಡಳು. ಆ ಮೇಲೆ ಒಂದು ಮೂಲೆಗೆ ಓಡಿಹೋಗಿ ಕುಸಿದು ಬಿದ್ದುಕೊಂಡಳು. ಬಿಕ್ಕಿಬಿಕ್ಕಿ ಅಳುತ್ತಿದ್ದ ಕಾರಣದಿಂದ ಅವಳ ಮೈಯೆಲ್ಲ ಅಲುಗುತ್ತಿತ್ತು. ಮುರುಗ ಹಿಂದಿರುಗಿದ. ಅವಳನ್ನು ನೋಡಿದ. ಅರ್ಥವಾಗಲಿಲ್ಲ. ನೂರಾರು ಪ್ರಶ್ನೆ ಕೇಳಿದ. ಉತ್ತರ ಬರಲಿಲ್ಲ. ಲಕ್ಷ್ಮಿ ಅಳುತ್ತಲೇ ಇದ್ದಳು. ಒಡೆದ ಮಡಕೆಯ ಕಡೆ ಅವನ ನೋಟ ಹೊರ

ಳಿತು. ಅವಳನ್ನು ಸಂತೈಸುವುದಕ್ಕಾಗಿ, " ಪರವಾ ಇಲ್ಲ ಬಿಡು. ದೇವರು ಯಾವಾಗ ಅನುಕೂಲ ಮಾಡಿಕೊಡುತ್ತಾನೋ ಆಗ ಹೊಸದೊಂದು ಮಡಕೆಯನ್ನೂ ಅಕ್ಕಿಯನ್ನೂ ಕೊಂಡುಕೊಳ್ಳೋಣವಂತೆ" ಎಂದ. ಮಡಕೆ ಯನ್ನು ಕೈತಪ್ಪಿ ಒಡೆದುಬಿಟ್ಟು ಅಳುತ್ತಿದ್ದಾಳೇನೋ ಎಂದು ಅವನ ಭಾವನೆ.

" ನಾ ·····ನಾ·······ನಾನಲ್ಲ........ಕಾ........ಕಾಳಿ ಬಂದಿದ್ದಳು....."

ವಾಕ್ಯ ಪೂರಯಿಸುವುದಕ್ಕಾಗಲಿಲ್ಲ ಅವಳ ಕೈಯ್ಯಲ್ಲಿ. ಮುರುಗನಿಗೆ ಎಲ್ಲವೂ ಅರ್ಥವಾಯಿತು. ಸುಮ್ಮನೆ ನಿಂತ. ಯೋಚನೆ ಮಾಡಿದಷ್ಟಕ್ಕೂ, ಮನಸ್ಸು ಇನ್ನೂ ಮೊದ್ದುಮೊದ್ದಾಗುತ್ತ ಹೋಯಿತು. ಅವನಿಗೆ ಒಂದೇ ಒಂದರ ಅರಿವಾಗುತ್ತಿದ್ದುದು—ದ್ವೇಷ. ಎಲ್ಲ ವಿಷಯಗಳ ಮೇಲೂ ಎಲ್ಲರ ಮೇಲೂ ದ್ವೇಷ. ಹೆಂಡತಿಯ ಕಡೆ ಒಂದು ಕ್ಷಣ ನೋಡಿ, ಸದ್ದು ಮಾಡದೆ ಪಕ್ಕದ ಕೋಣೆಗೆ ಹೋದ. ಪೆಟ್ಟಿಗೆಯ ಮೇಲೆ ಮೆಟ್ಟಿಂಗಾ ಲಿಟ್ಟು ನಿಂತುಕೊಂಡು, ಒಂದು ಹಗ್ಗವನ್ನು ಸೂರಿನ ತೊಲೆಗೆ ಕಟ್ಟಿದ. ಹಗ್ಗದ ಇನ್ನೊಂದು ತುದಿಯಲ್ಲಿ ಒಂದು ಕುಣಿಕೆಯನ್ನು ಬಿಗಿದ. ಅದನ್ನು ತನ್ನ ಕುತ್ತಿಗೆಯ ಮೇಲೆ ಹಾಕಿಕೊಂಡ. ಆಗಲೂ ಕೂಡ ಅವನ ಮನಸ್ಸಿಗೆ ಅರಿತವಾಗುತ್ತಿದ್ದುದು ಒಂದೇಒಂದು—ಅನಂತವಾದ ಯಾತನೆ ಅದರ ಜತೆಗೆ ತನ್ನ ಆತ್ಮವನ್ನೇ ಸುಡುವಂಥ ಒಂದು ದ್ವೇಷ.

ಪಕ್ಕದ ಕೊಠಡಿಯಿಂದ ಬಂದ ವಿಕಾರವಾದ ಸ್ವರವನ್ನು ಕೇಳಿ ಲಕ್ಷ್ಮಿ ಬೆಚ್ಚಿಬಿದ್ದಳು. ಆ ದೃಶ್ಯವನ್ನು ಕಂಡು ಅವಳ ನೆತ್ತರು ಹೆಪ್ಪು ಗಟ್ಟಿತು.

ಅಲ್ಲಿ ಇಲ್ಲಿ ಸುತ್ತಿ ಕಣ್ಣ ಮನೆಗೆ ಹೋದ. ಒಂದು ಸೇರು ಅಕ್ಕಿ ಯನ್ನು ಕೊಟ್ಟದ್ದಕ್ಕಾಗಿ ಕಾಳಿ ಅವನನ್ನು ತುಚ್ಛವಾಗಿ ಮೂದಲಿಸಿದಳು.

" ಅಹಹಹಾ. ನಿನ್ನ ಕೃಪೆಯಿಂದ ಅವರಿಗೆ ಈಗ ಔತಣ ಆಗುತ್ತಾ ಇರಬೇಕು. ಹಿ....ಹಿ....ಹಿ....ಹಿ····ಅವರ ಔತಣ ಚೆನ್ನಾಗಿ ನಡೆಯ ಲೆಂದು ನಾನೂ ನನ್ನ ಕೈಲಾದ ಸಹಾಯಮಾಡಿದೆ........"

" ನೀನು ಅಲ್ಲಿಗೆ ಹೋಗಿದ್ದೆಯೇನು ? "

" ಹೋಗಕೂಡದೇನು ? ನನ್ನ ಮುದ್ದು ತಂಗಿಯ ಮನೆಗೆ ? "

ಕಣ್ಣನಿಗೆ ತುಂಬ ಬೇಸರವಾಗಿಹೋಯಿತು. ಸ್ವಲ್ಪಹೊತ್ತು ಎಲ್ಲಾದರೂ ಮನೆಬಿಟ್ಟು ಹೊರಟುಹೋಗುವುದು ಲೇಸೆನ್ನಿಸಿತು. ಹೊಟ್ಟೆ ತಾಳ ಹಾಕುತ್ತಿದ್ದರೂ ಗೊತ್ತುಗುರಿಯಿಲ್ಲದೆ ಎಲ್ಲೆಲ್ಲೋ ಅಲೆದಾಡಿದ. ತಮ್ಮನ ಮನೆ ಸಿಕ್ಕಿತು. ಅವರು ಏನುಮಾಡುತ್ತಿದ್ದರೋ ನೋಡೋಣವೆಂದು ಒಳಕ್ಕೆ ಹೆಜ್ಜೆಯಿಟ್ಟ.

ತಮ್ಮನೂ ತಮ್ಮನ ಹೆಂಡತಿಯೂ ಪಕ್ಕಪಕ್ಕದಲ್ಲಿ ತೊಲೆಯಿಂದ ನೇತಾಡುತ್ತಿದ್ದರು. ಅದನ್ನು ಕಂಡು ಕಣ್ಣನ ಕಣ್ಣುಗುಡ್ಡೆಗಳು ಕಳಚಿದಂತಾದುವು. ಮೂಲೆಯಲ್ಲೊಂದು ಡೊಂಕು ಮಚ್ಚು ಬಿದ್ದಿತ್ತು. ಅದನ್ನು ತೆಗೆದುಕೊಂಡು, ಹಗ್ಗಗಳನ್ನು ಕತ್ತರಿಸಿ ಇಬ್ಬರನ್ನೂ ಪಕ್ಕಪಕ್ಕದಲ್ಲಿ ಮಲಗಿಸಿ, ತನ್ನ ವಸ್ತ್ರದಿಂದ ಅವರ ಮುಖವನ್ನು ಮುಚ್ಚಿದ. ಒಡೆದ ಮಡಕೆಯೂ ಚೆದುರಿದ ಅಗುಳುಗಳೂ ಅವನ ಕಣ್ಣಿಗೆ ಬಿದ್ದುವು. " ಅವರ ಔತಣ ಚೆನ್ನಾಗಿ ನಡೆಯಲೆಂದು ನಾನೂ ನನ್ನ ಕೈಲಾದಮಟ್ಟಿಗೆ ಸಹಾಯ ಮಾಡಿದೆ "... ಎಂದು ಕಾಳಿ ಹೇಳಿದ ಮಾತು ಅವನಿಗೆ ಜ್ಞಾಪಕವಾಯಿತು. ಮಚ್ಚನ್ನು ತೆಗೆದುಕೊಂಡು ಹೊರಟ.

ಅವನು ಮನೆಗೆ ಬಂದ ತಕ್ಷಣ ಅವನ ಹೆಂಡತಿ " ನಿನ್ನ ವಸ್ತ್ರವೆಲ್ಲಿ?" ಎಂದು ಕೇಳಿದಳು.

" ನನ್ನ ತಮ್ಮನ ಮನೆಯಲ್ಲಿ ಏನುಮಾಡಿದೆ ನೀನು ? " ಎಂದು ಅವನು ಕೇಳಿದ.

" ಓಹ್ಹೋ ! ನೀನೂ ಗಂಡುಸಾಗುತ್ತಾ ಇದ್ದೀಯಾ ? " ಎಂದು ಅವಳು ಅಣಕಿಸಿದಳು.

" ಮುಚ್ಚು ಬಾಯಿ, ಕತ್ತೆ........ಅವರ ಅನ್ನದ ಮಡಕೆ ಒಡೆದವಳು ನೀನೇ ತಾನೇ ? "

"ನಾನೋ, ನಮ್ಮ ತಾತನೋ! ಅದೆಲ್ಲ ಕೇಳುವುದಕ್ಕೆ ನೀನು ಯಾರು? ಆ ಹೆಂಗಸಿಗೆ ಇನ್ನೂ ಕೆಲವು ಉಡುಗೊರೆಗಳನ್ನು ಒಪ್ಪಿಸ ಬೇಕು ಎಂದು ಇಷ್ಟವೇನೋ? ಅಲ್ಲವೇ ಮತ್ತೆ? ಗುಂಡಪ್ಪನ ಹೆಂಡತಿಗೆ ಊರೆಲ್ಲ ಗಂಡಂದಿರೆ "

ಹಲ್ಲನ್ನು ಕಟಕಟನೆ ಕಡಿಯುತ್ತಾ, "ಅಯ್ಯೋ ಚಂಡಾಲಿ" ಎಂದು ಉಸುರಿ, ನುಗ್ಗಿದ ಕಣ್ಣ. ಅವಳ ತಲೆಕೂದಲನ್ನು ಹಿಡಿದು ಜಗ್ಗಿಸಿ, ಕತ್ತನ್ನು ತಿರುವಿ ತನ್ನ ಬಲವನ್ನೆಲ್ಲ ಬಿಟ್ಟು ಮಚ್ಚನ್ನು ಕುತ್ತಿಗೆಯ ಮೇಲೆ ಇಳಿಸಿದ. ಒದ್ದಾಡುತ್ತ ಹೊರಳಾಡುತ್ತ ಅವಳ ಕಳೇಬರ ರಕ್ತದ ಕುಪ್ಪೆಯಾಗಿ ಕೆಳಗೆ ಬಿತ್ತು. ಚಿಲುಮೆಯಂತೆ ರಕ್ತ ಚಿಮ್ಮತೊಡಗಿತು. ಕಣ್ಣ ಬೀದಿಯೊಳಕ್ಕೆ ಓಡಿಹೋಗಿ ಗಟ್ಟಿಯಾಗಿ ಕೂಗಿಕೊಂಡ, "ಗಂಡಸರು, ಹೆಂಗಸರು, ಮಕ್ಕಳು, ಮುದುಕರು, ಎಲ್ಲ ಬನ್ನಿ, ಎಲ್ಲ ಬನ್ನಿ. ನಿಮಗಾಗಿ ನಾನೊಂದು ನಾಟಕ ಏರ್ಪಾಡು ಮಾಡಿದ್ದೇನೆ. ನೋಡಿಬನ್ನಿ; ದುಡ್ಡು ಕೊಡಬೇಕಾಗಿಲ್ಲ, ಬಿಟ್ಟಿ ನೋಡಬಹುದು........ಬನ್ನಿ, ಬನ್ನಿ, ಒಂದೇ ಒಂದುಸಲ ನೋಡಿ........"

# ಮೊದಲ ಬಲಿ

ಸಂಜೆ ಆರುಗಂಟೆಯ ಸಮಯ. ನಂಜನಗೂಡು ರೈಲು ಚಾಮರಾಜ ಪುರದ ರೈಲ್ವೇ ಗೇಟನ್ನು ಹಾದುಹೋಗುತ್ತಿತ್ತು. ಇದ್ದಕ್ಕಿದ್ದಂತೆ ರಸ್ತೆಯ ಲ್ಲಿದ್ದ ಹುಡುಗನೊಬ್ಬನು ಕಂಬಿಯನ್ನು ದಾಟುವುದಕ್ಕೆಂದು ಮುಂದೆ ನುಗ್ಗಿದ. ಏನಾಯಿತೆಂಬುದು ಪಕ್ಕದಲ್ಲಿದ್ದವರಿಗೆ ತಿಳಿಯುವುದರೊಳಗೆ ಹುಡುಗನ ಗತಿ ಮುಗಿದಿತ್ತು. ಕೆಲವು ಮಾರುಗಳು ಮುಂದೆಹೋಗಿ ರೈಲು ನಿಂತಿತು. ಹುಡುಗನ ಮೈಯ್ಯಿ ಕಂಬಿಗೆ ಅಂಟಿಕೊಂಡು ಅಪ್ಪಚ್ಚಿ ಯಾಗಿ ಬಿಟ್ಟಿತ್ತು.

ಪೋಲೀಸಿನವರು ಬರೆದುಕೊಳ್ಳಬೇಕಾದುದನ್ನೆಲ್ಲ ಬರೆದುಕೊಂಡಾ ಯಿತು. ಗುಂಪುಕಟ್ಟಿಕೊಂಡಿದ್ದ ಜನರು ನೋಡಬೇಕಾದುವನ್ನೆಲ್ಲ ನೋಡಿ ಯಾಯಿತು. ರೈಲು ಮತ್ತೆ ಚಲಿಸಿತು. ನಾನು ಮತ್ತೆ ಮುಂದೆ ಹೊರಟೆ. ಮನಸ್ಸಿನಲ್ಲಿ ಏನೇನೋ ದುಃಖದ ಆಲೋಚನೆಗಳು ತುಂಬಿದ್ದುವು. ಕುಕ್ಕರಹಳ್ಳಿಕೆರೆಯ ಕಡೆ ಹೋಗುವ ದಾರಿಯಲ್ಲಿ ತಿರುಗಿಕೊಂಡೆ. ಹಿಂದೆಯೇ ಯಾರೋ ಬರುತ್ತಿದ್ದಹಾಗೆ ತೋರಿತು. ಯಾರೆಂದು ತಿರುಗಿ ನೋಡಿದೆ. ಅನಾಹುತವಾದಾಗ ಸೇರಿದ ಗುಂಪಿನಲ್ಲಿ ಅವನೂ ಇದ್ದ ಎನ್ನುವುದು ನೆನಪಾಯಿತು. “ಆ ಹುಡುಗ ಯಾರು ?” ಎಂದು ಕೇಳಿದೆ. “ನನಗೆ ಗೊತ್ತಿಲ್ಲ ಸ್ವಾಮಿ. ಅನ್ಯಾಯ. ತೀರ ಅನ್ಯಾಯ, ಪಾಪ ! ಅವನ ಅಜಾ ಗರೂಕತೆಯಿಂದ ಹಾಗಾಯಿತು ಅಂತೀರೇನು ?........ಬೆಟ್ಟದ ಮೇಲಿಂದ ಬಂಡೆಯನ್ನುರುಳಿಸಿದರೆ ಹೇಗೆ ಅದು ಕೆಳಕ್ಕೆ ಬಂದೇತೀರಬೇಕೋ ಹಾಗೆ ಅವನೂ ಚಕ್ರದ ತಳಕ್ಕೆ ಉರುಳಿದ. ಅದೆಲ್ಲ ಅವನ ಅಧೀನದಲ್ಲಿದೆಯೇ ? ಅವನಲ್ಲದೆಹೋಗಿದ್ದರೆ ಬೇರೆ ಯಾವುದಾದರೂ ಹುಡುಗನಿಗೆ ಅದೇಗತಿ ಒದಗುತ್ತಿತ್ತು. ನನಗೆ ಗೊತ್ತು ಆದರ ಸಂಗತಿಯೆಲ್ಲ........ಈ ರೈಲು ಗೇಟಿನಲ್ಲಿ ನಾನೂ ಕೆಲವು ಕಾಲ ಜವಾನನಾಗಿದ್ದೆ........”

ಈ ವೇಳೆಗೆ ನಾವು ರಸ್ತೆಯ ಕೊನೆಗೆ ಬಂದಿದ್ದೆವು. "ನಾನು ಕೆರೆಯ ಸುತ್ತ ಸುತ್ತಾಡಿಕೊಂಡು ಮನೆಗೆ ಹೋಗಬೇಕೆಂದಿದ್ದೇನೆ'' ಎಂದೆ.

"ನಾನೂ ಆ ಕಡೆಯೇ ಹೋಗುವವನೇ" ಎಂದು ಹೇಳಿ ಅವನೂ ನನ್ನ ಜತೆಯಲ್ಲೇ ಬಂದ. ನಿಲ್ಲಿಸಿದ ಕತೆಯನ್ನು ಮುಂದುವರಿಸಿದ.

"ಹಿಂದೊಮ್ಮೆ ನನಗೆ ಕಪಿನೀ ನದಿಯ ತೀರದಲ್ಲಿ ಹತ್ತೆಕರೆ ಭೂಮಿ, ಒಂದು ಮನೆ, ಇಪ್ಪತ್ತು ದನ, ಹಳ್ಳಿಯಲ್ಲೊಂದು ತೆಂಗಿನತೋಟ ಇವೆಲ್ಲ ಇದ್ದುವು. ಹೇಳಿಕೊಳ್ಳುವಂಥ ಐಶ್ವರ್ಯವೇನೂ ಅಲ್ಲ ಅದು, ಆದರೆ ನನ್ನಂಥ ಬಡವನು ಹಿಟ್ಟುಬಟ್ಟೆ ಕಳೆದು ನೆಮ್ಮದಿಯಾಗಿ ತೃಪ್ತಿಯಾಗಿದ್ದು ಕೊಂಡಿರುವುದಕ್ಕೆ ಸಾಕು. ಹುಲುಸಾದ ಪೈರು ಬರುತ್ತಿತ್ತು ಧಾರಣೆವಾಸಿ ಅನುಕೂಲವಾಗಿತ್ತು ಎಲ್ಲಕ್ಕಿಂತ ಮುಖ್ಯವಾಗಿ, ಕೈಹಿಡಿದ ಹೆಂಡತಿ ಚಿನ್ನ ದಂತಿದ್ದಳು........

ನನ್ನ ಮೊದಲನೆಯ ಮಗನಿಗೆ ನಾಲ್ಕು ವರ್ಷವಿರಬಹುದು. ಎರಡನೆಯವನಿಗೆ ಒಂದೂವರೆಯಾಗಿತ್ತು. ಸರಿ, ನೋಡಿ—ಧಾರಣೆ ಬೀಳತೊಡಗಿತು. ದುಡ್ಡು ಕೊಡುತ್ತೇನೆ, ಭತ್ತ ತೆಗೆದುಕೊಂಡು ಕಾಪಾಡಿರಪ್ಪ ಎಂದು ಹೇಳುವಂಥ ಕಾಲ ಬಂತು. ನೂರು ಸೇರಿಗೆ ನಾಲ್ಕು ರೂಪಾಯಿ ಕೂಡ ಗಿಟ್ಟುತ್ತಿರಲಿಲ್ಲ. ಇದನ್ನಿಟ್ಟುಕೊಂಡು ನಾವು ಬಟ್ಟೆ ಕೊಂಡುಕೊಳ್ಳುವುದೇನು, ಹಬ್ಬ ಹರಿದಿನಗಳನ್ನು ಆಚರಿಸುವುದೇನು, ಕಂದಾಯ ಕಟ್ಟುವುದೇನು? ಆ ಶೇಕದಾರನೋ—ಸುಮಾರು ಮನುಷ್ಯರ ರಕ್ತ ಕುಡಿದೇ ಅವನು ಬದುಕಿರುತ್ತಿದ್ದ ಎಂದು ಕಾಣುತ್ತೆ. ರಾಕ್ಷಸ ಅವನು. ಸಮಯ ಸಿಕ್ಕಿದರೆ ಸಾಕು, ನಕ್ಷತ್ರಿಕನಂತೆ ನಮ್ಮ ಭೂಮಿ ಕಾಣಿಯನ್ನೆಲ್ಲ ಮುಟ್ಟುಗೋಲು ಹಾಕಿಕೊಂಡು ಹರಾಜು ಹಾಕಿಬಿಡುತ್ತಿದ್ದ. ನನ್ನ ತೆಂಗಿನ ತೋಟ ಹೋಯಿತು. ನನ್ನ ಇಪ್ಪತ್ತು ದನ ಹೋಯಿತು. ನನ್ನ ಭೂಮಿ ಹೋಯಿತು. ಕೊನೆಗೆ ನನ್ನ ಹೆಂಡತಿಯ ಮೈಮೇಲಿದ್ದ ಒಡವೆಗಳನ್ನು ಕೂಡ ಒಪ್ಪಿಸಬೇಕಾಗಿ ಬಂತು. ಹೆಂಡತಿಯ ಸೊತ್ತನ್ನ ಮುಟ್ಟಬೇಕಾಗಿ ಬಂದ ಅವಮಾನಕ್ಕೆ ನನ್ನನ್ನು ನಾನು ಇರಿದುಕೊಂಡರೂ ಸಾಲದು. ಆದರೇನುಮಾಡುವುದು?

ಇಷ್ಟಾದಮೇಲೆ ಹಳ್ಳಿಯಲ್ಲಿ ನಮಗಿನ್ನೇನು ಕೆಲಸ? ಪಟ್ಟಣದ ಕಡೆಗೆ ಹೊರಡಲು ಗಂಟುಮೂಟೆ ಕಟ್ಟಿದೆವು. ಹಳ್ಳಿಯವರಿಗೆ ಯಾವಾಗಲೂ, ಪಟ್ಟಣವೆಂದರೆ ಕುಬೇರನ ರಾಜಧಾನಿ ಎಂಬ ಭ್ರಾಂತಿ. ಅದಲ್ಲದೆ, ಅಲ್ಲಿ ನಮ್ಮ ಗುರುತಿನವರು ಯಾರೂ ಇರುವುದಿಲ್ಲ ಸದ್ಯ ಎಂಬ ಧೈರ್ಯ ಬೇರೆ ಇರುತ್ತದೆ. ನೀವು ಯಾರೆಂದು ಒಬ್ಬರಿಗೂ ತಿಳಿಯದ ಜಾಗದಲ್ಲಿ ಸಂಕೋಚವಿಲ್ಲದೆ ತಿರುಪೆ ಬೇಡಬಹುದು, ಹೊಟ್ಟೆಗಿಲ್ಲದೆ ಸಾಯಲೂ ಬಹುದು; ಆದರೆ ಮನೆಯವರೆಲ್ಲ ಏಳು ತಲೆಯಿಂದ ಎಲ್ಲರಿಗೂ ಗೊತ್ತಿರುವ ಸ್ಥಳದಲ್ಲಿ ಅದೇ ಕೆಲಸ ಮಾಡುವುದು ಅಸಾಧ್ಯ.

ಕಾಲುನಡಗೆಯಲ್ಲೇ ಮೈಸೂರಿಗೆ ಬಂದೆವು. ಇದ್ದಬದ್ದ ಒಂದೆರಡು ಕಾಸೂ ಬೇಗನೆ ಕರಗಿಹೋಯಿತು. ಪಟ್ಟಣವೆನ್ನುವುದು ಕುಬೇರನ ರಾಜಧಾನಿಯಲ್ಲವೆನ್ನುವುದನ್ನು ತಿಳಿದುಕೊಳ್ಳಲು ಬಹಳ ಕಾಲವೇನೂ ಹಿಡಿಯಲಿಲ್ಲ. ನನ್ನನ್ನಾಗಲಿ ನನ್ನ ಹೆಂಡತಿಯನ್ನಾಗಲಿ ಚಾಕರಿಗೆ ತೆಗೆದುಕೊಳ್ಳುವ ದಣಿ ಯಾರೂ ಸಿಕ್ಕಲಿಲ್ಲ. ಕೆಲಸದ ಬೇಟೆಯಲ್ಲಿ ನಿತ್ಯವೂ ನಮ್ಮ ಕಾಲುಗಳು ಸವೆದುಹೋದುವು.

ಹಳ್ಳಿಯನ್ನು ಬಿಟ್ಟು ಕೆಟ್ಟೆವಲ್ಲಾ ಎಂದು ಕಣ್ಣೀರು ಕರೆದುವು. ನಿತ್ಯ ಏಕಾದಶಿ. ನಾನೆಲ್ಲಾದರೂ ಹೋಗಿರುವಾಗ ನನ್ನ ಹೆಂಡತಿ ಮಕ್ಕಳನ್ನು ಬಾವಿಗೆ ನೂಕಿ ತಾನೂ ಎಲ್ಲಿ ಬಿದ್ದುಬಿಡುವಳೋ ಎಂದು ನನಗೆ ಬಹಳ ದಿಗಿಲಾಗುತ್ತಿತ್ತು. ಕೆಲವರು ಹಾಗೂ ಮಾಡಿರುವುದುಂಟಂತೆ. ಮಕ್ಕಳು ತಿಂಡಿಗಾಗಿ ಅತ್ತು ಅತ್ತು ವಡೆ ಕಡುಬು ಮಾರುವ ಮುದುಕಿಯರ ಹತ್ತಿರ ಅಂಗಲಾಚಿಕೊಂಡು ಹೊಟ್ಟೆ ತುಂಬಿಕೊಳ್ಳುತ್ತಿದ್ದರು. ಮಕ್ಕಳಿಗಾಗಿ ನಾನೂ ಆಗಾಗ ಭಿಕ್ಷೆಯೆತ್ತುತ್ತಿದೆ........

ಈ ಸ್ಥಿತಿಯಲ್ಲಿದ್ದಾಗ, ಚಾಮರಾಜಪುರದ ರೈಲುಗೇಟಿಗೆ ಒಬ್ಬ ಜವಾನ ಬೇಕು ಎಂಬ ಸುದ್ದಿ ತಿಳಿದುಬಂತು. ಹೋಗಿ ಸ್ಟೇಷನ್‌ಮಾಸ್ಟರ ಕಾಲಿಗೆಬಿದ್ದು, ಹಲ್ಲುಕಿರಿದು, ದಮ್ಮಯ್ಯಗುಡ್ಡೆ ಹಾಕಿದೆ. ಕೆಲಸ ದಕ್ಕಿತು. ನಮ್ಮ ಸಂತೋಷವೇ ಸಂತೋಷ. ಕಡೆಗೂ ದೇವರು ದಯೆದೋರಿದನಲ್ಲ, ಎಂದು.

ದೊರೆಯ ಬಾಳಿನಂಥ ಬಾಳು ಸ್ವಾಮಿ. ತಿಂಗಳಿಗೆ ಹತ್ತು ರೂಪಾಯಿ ಕೊಟ್ಟು ಒಂದು ಮನೆಯನ್ನು ಕೊಟ್ಟರು—ಒಳ್ಳೆಯ ಕಲ್ಲು ಕಟ್ಟಡ. ರೈಲು ದಾರಿ ಪಕ್ಕದಲ್ಲೇ. ನಾನು ಅಂದುಕೊಂಡಿದ್ದುದಕ್ಕಿಂತ ಅನುಕೂಲ ವಾಗಿಯೇ ಇತ್ತು. ನನಗೆ ಹೆಚ್ಚು ಕೆಲಸವೂ ಇರಲಿಲ್ಲ. ರೈಲು ಬರುವ ವೇಳೆಗೆ ಗೇಟನ್ನು ಮುಚ್ಚುವುದು, ಹಾದು ಹೋದ ಕೂಡಲೆ ತೆರೆಯು ವುದು. ಅಂಥ ಕಷ್ಟವಾದ ಕೆಲಸವೇನೂ ಅಲ್ಲ.

ಒಂದು ದಿನ ಕಂಬಿಯ ಪಕ್ಕದಲ್ಲಿ ಹಾದು ಹೋಗುತ್ತಿದ್ದವನೊಬ್ಬನು ನಮ್ಮ ಮನೆಯ ಮುಂದೆ ನಿಂತು, ನನ್ನ ಹತ್ತಿರ ಹೊಗೆಸೊಪ್ಪಿದೆಯೇ ಎಂದು ಕೇಳಿದ. ಯಾರೆಂದು ನೋಡಿದೆ—ನಿತ್ಯವೂ ದೊಡ್ಡ ಸ್ಟೇಷನ್ನಿನಿಂದ ಚಾಮರಾಜಪುರದ ಸ್ಟೇಷನ್ನಿನವರೆಗೆ ಸಿಗ್ನಲ್ ಕಂಬಗಳ ಮೇಲಿನ ದೀಪ ಗಳನ್ನೆಲ್ಲ ಒರೆಸಿ ಎಣ್ಣೆ ತುಂಬುವ ಆಳು. ಒಂದಷ್ಟು ಹೊಗೆಸೊಪ್ಪನ್ನು ಕೊಟ್ಟೆ. ಸ್ಟೇಷನ್ನಿಗೆ ಹಿಂದಿರುಗುವುದಕ್ಕೆ ಅವನಿಗೆ ಇನ್ನೂ ಒಂದು ಗಂಟೆಯ ಪುರುಸುತ್ತಿತ್ತು. ಆದ್ದರಿಂದ ನಮ್ಮ ಮನೆಯ ಜಗುಲಿಯ ಮೇಲೆ ಕೂತುಕೊಂಡ. ಎಕ್ಸ್‌ಪ್ರೆಸ್ ಬಂಡಿ ಬರುವುದಕ್ಕೆ ಇನ್ನೂ ಎರಡು ಗಂಟೆಯ ಹೊತ್ತಿತ್ತು. ಆದ್ದರಿಂದ ನಾನೂ ಆರಾಮವಾಗಿ ಕೂತುಕೊಂಡು ಹೊಗೆಸೊಪ್ಪನ್ನು ಅಗೆಯುತ್ತಾ ಹರಟೆಕೊಚ್ಚುವುದಕ್ಕೆ ಮೊದಲು ಮಾಡಿದೆ. ಆಮಾತು ಈಮಾತು ಆಡುತ್ತಾ ಇದ್ದೆವು. ಅವನು ಹೇಳಿದ: 'ನಿನಗೆ ಹಿತವನ್ನು ಬಯಸಿ ನಿನಗೊಂದು ಮಾತನ್ನು ಹೇಳುತ್ತೇನೆ. ಈ ಕೆಲಸ ಬಿಟ್ಟು ಬಿಟ್ಟು ಬೇರೆಯಾವುದಾದರೂ ಕೆಲಸಕ್ಕೆ ಸೇರಿಕೋ. ಸಾವಿರ ರೂಪಾಯಿ ಕೊಟ್ಟರೂ ಈ ಕೆಲಸಕ್ಕೆ ಬೇರೆ ಯಾರೂ ಬರುವುದಿಲ್ಲ. ಅದರಿಂದಲೇ ಸರಕಾರದವರು ನಿನ್ನನ್ನ ತೆಗೆದುಕೊಂಡಿರುವುದು.'

ಆಮೇಲೆ ಅವನು ಈ ಕತೆ ಹೇಳಿದ: ಅನೇಕ ವರ್ಷದ ಹಿಂದಿನ ಮಾತು. ಆಗತಾನೇ ಕಬ್ಬಿಣದ ಕಂಬಿಯನ್ನು ಹಾಕಿದ್ದರು. ಅದೇ ಮೊದಲನೆಯ ಸಲ ರೈಲು ಬಂಡಿ ಕಂಬಿಯ ಮೇಲೆ ಉರುಳುರುಳಿಕೊಂಡು ಈಕಡೆ ಬಂತು. ಇದೇ ಸ್ಥಳದಲ್ಲಿ ಒಂದು ಮಗು ಚಕ್ರದ ಕೆಳಗೆ ಸಿಕ್ಕಿ ಕೊಂಡು ಸತ್ತುಹೋಯಿತು. ರೈಲಿಗೆ ಮೊದಲನೆಯ ದಿನವೇ ಒಂದು

ಆಹುತಿಯಾಯಿತು. ನಿನ್ನ ಮನೆ ಇದೆಯಲ್ಲ, ಅದೇ ಸ್ಥಳದಲ್ಲಿ ಒಂದು ಗುಡಿಸಿಲಿತ್ತು. ಅದರಲ್ಲಿ ಒಬ್ಬ ಹೆಂಗಸು ವಾಸಮಾಡುತ್ತಿದ್ದಳು. ಸತ್ತು ಹೋದ ಮಗು ಅವಳದು. ಮಗುವನ್ನು ಗುಡಿಸಿಲಲ್ಲೇ ಬಿಟ್ಟು ಕೆಲಸಕ್ಕೆ ಹೋಗಿ ಬರುತ್ತಿದ್ದುದು ಅವಳ ವಾಡಿಕೆ. ಮಗು ಸಾಧಾರಣವಾಗಿ ಮನೆಯ ಪಕ್ಕದ ಬಯಲಿನಲ್ಲಿ ಆಟವಾಡುತ್ತಿತ್ತು. ನಮ್ಮ ಕಡೆ ರೈಲು ಬಂದಮೇಲೆ ಮೊದಲು ಬಲಿಯಾದುದೆಂದರೆ ಆ ಮಗುವೇ. ತಾಯಿ ಕೆಲಸಕ್ಕೆ ಹೋಗಿದ್ದವಳು ವಾಪಸು ಬಂದಳು. ಏನಾಗಿ ಹೋಯಿತೆಂಬು ದನ್ನು ನೋಡಿದಳು. ಹುಚ್ಚು ಹಿಡಿದುಬಿಟ್ಟಿತು ಅವಳಿಗೆ. ಸಿಕ್ಕಾಪಟ್ಟೆ ಕೂಗಾಡಹತ್ತಿದಳು. ಆಗ ಯಾರಾದರೂ ಅವಳಿಗೆ ಸಮಾಧಾನ ಹೇಳಿ ಒಂದು ಒಳ್ಳೆಯ ಮಾತಾಡಿದ್ದರೆ ನೂರಾರು ಮಕ್ಕಳ ಪ್ರಾಣವನ್ನು ಕಾಪಾಡಬಹುದಾಗಿತ್ತು. ಅದರ ಬದಲು ಮಗುವನ್ನೇಕೆ ಹಾಗೆ ಬಿಟ್ಟು ಬಿಟ್ಟು ತಿರುಗಾಲತಿಪ್ಪಿಯ ಹಾಗೆ ಹೊರಟು ಹೋದೆ ಎಂದು ಕೆಲವರು ಗದರಿಸಿಕೊಂಡರು................ಇದನ್ನು ಕೇಳಿ, "ಹೂ, ಹೂ, ನಿಮ್ಮ ಮಗು ರೈಲಿಗೆ ಸಿಕ್ಕಿ ಸತ್ತಾಗ ಹೇಗಿರುತ್ತೋ ನೋಡಿ" ಎಂದು ಕಿರಿಚಿಕೊಂ ಡಳು ಅವಳು. ಅಂದಿನಿಂದ ಗುಡಿಸಲಲ್ಲೇ ಕುಳಿತುಕೊಂಡು ಬೀದಿಯಲ್ಲಿ ಬಂದು ಹೋಗುವವರಿಗೆಲ್ಲ "ನಿಮ್ಮ ಮಗುವೂ ರೈಲು ಚಕ್ರಕ್ಕೆ ಸಿಕ್ಕಿ ಸತ್ತು ಹೋಗಲಿ" ಎಂದು ಶಾಪಹಾಕುತ್ತಿದ್ದಳು. ಆದಾದ ಒಂದು ವಾರದ ಮೇಲೆ ರಾತ್ರಿ ಬಂಡಿಯ ಕೆಳಕ್ಕೆ ಬಿದ್ದು ಅವಳು ಸತ್ತು ಹೋದಳು. ಪ್ರತಿ ವರ್ಷವೂ, ಈ ದಿನ ಬಂದರೆ ಸರಿ, ಹತ್ತಿರವಿರುವ ಯಾವ ಮಗು ವನ್ನಾದರೂ ಹಿಡಿದುಕೊಂಡು ಅವಳು ಚಕ್ರದ ಕೆಳಕ್ಕೆ ನೂಕಿಬಿಡುತ್ತಾಳೆ. ಎಷ್ಟೋ ವರ್ಷದಿಂದ ಇದೇ ರೀತಿ ಆಗುತ್ತಿದೆ. ಮಕ್ಕಳು ಯಾರೂ ಹತ್ತಿರ ವಿಲ್ಲದಿದ್ದರೆ ದೊಡ್ಡವರನ್ನೇ ದಬ್ಬಿಬಿಡುತ್ತಾಳೆ."

ಸ್ವಾಮಿ, ಈ ಕತೆಯನ್ನು ಕೇಳಿದೆ. ಮೈಯಲ್ಲ ನಡುಗಿತು. ಆವತ್ತು ರಾತ್ರಿ ಹನ್ನೊಂದೂವರೆ ಗುಡ್ಸ್ ಬಂಡಿ ಬಂದಾಗ ನನ್ನ ಮೈಯಲ್ಲ ಬೆವರಿತು. ಕತ್ತಲಾದ ಮೇಲೆ ಅಲ್ಲಿ ಜನರ ಸುಳಿವೇ ಇರುವುದಿಲ್ಲ ಸ್ವಾಮಿ. ಕೊನೆಮೊದಲೇ ಇಲ್ಲದೆ ಹಾದುಹೋಗಿರುವ ರೈಲುಕಂಬಿ ಬೆಟ್ಟದ ಹಾವಿ

ನಂತೆ ಕಾಣುತ್ತೆ. ಗೇಟಿನ ಮೇಲಿರುವ ಕೆಂಪು ದೀಪಗಳೇ ಅದರ ಕಣ್ಣು ಗಳಂತೆ ತೋರುತ್ತೆ.

ಕತೆಯನ್ನು ನನ್ನ ಹೆಂಡತಿಗೆ ಹೇಳಿದೆ. ಶಿವನ ಮೇಲೆ ಭಾರಹಾಕಿ ಮಕ್ಕಳನ್ನು ಬಹಳ ಜೋಪಾನವಾಗಿ ಕಾಪಾಡಿಕೊಳ್ಳುತ್ತಿದ್ದೆವು. ರೈಲು ಬಂದಾಗಲೆಲ್ಲ, ಅವಳು ಮಕ್ಕಳನ್ನು ಅಪ್ಪಿಕೊಂಡು ಬಲವಾಗಿ ಹಿಡಿದು ಕೊಂಡಿರುತ್ತಿದ್ದಳು.

ಇದೇ ದಿನ ಆರುವರ್ಷಗಳ ಹಿಂದೆ ನನ್ನ ದೊಡ್ಡ ಹುಡುಗ ಹನ್ನೊಂ ದೂವರೆ ಗುಡ್ಸ್ ಗಾಡಿಗೆ ಸಿಕ್ಕಿ ಸತ್ತು ಹೋದ. ಇಬ್ಬರು ಹುಡುಗರೂ ತಮ್ಮ ತಾಯಿಯ ಪಕ್ಕದಲ್ಲಿ ಮಲಗಿದ್ದರು. ಬಹಳ ಚಳಿ ಆವತ್ತು ರಾತ್ರಿ ಕಗ್ಗತ್ತಲೆ. ನಾನು ಎದ್ದು ಮೈಸುತ್ತ ಬಲವಾಗಿ ಕಂಬಳಿಯನ್ನು ಹೊದ್ದು ಕೊಂಡು ಚಳಿಗೆ ನಡುಗುತ್ತ ಕೈಮರವನ್ನು ಹಿಡಿದುಕೊಂಡು ನಿಂತಿದ್ದೆ. ಭಾರವಾದ ಆ ಕರಿಯ ಗುಡ್ಸ್ ಬಂಡಿ ಗಡಗಡ ಎಂದು ಸದ್ದು ಮಾಡಿಕೊಂಡು ಬಂತು. ಅದರ ಕೆಳಗೆ ನನ್ನ ಮಗ ಪ್ರಾಣಬಿಡುತ್ತಿರುವುದನ್ನು ನೋಡುತ್ತಿದ್ದೇ ನೆಂಬುದು ನನಗೆ ತಿಳಿಯಲೇ ಇಲ್ಲ. ಕೊನೆಯ ವ್ಯಾಗನ್ನಿನ ಕೆಂಪು ದೀಪ ಕಾಣುವವರೆಗೆ ನಿಂತಿದ್ದು, ಒಳಗೆ ಹೋಗಿ ಮಲಗಿಕೊಂಡೆ. "ಅಮ್ಮ ಅಮ್ಮ" ಎಂಬ ಸದ್ದೊಂದನ್ನು ಕೇಳಿ ನನ್ನ ಹೆಂಡತಿ ಎದ್ದಳು. ಹುಡುಗನ ಹಾಸಿಗೆ ಬರಿದಾಗಿತ್ತು. ಅವನಿಗಾಗಿ ಎಲ್ಲೆಲ್ಲೂ ಹುಡುಕಿದೆವು. ಕೆಳ ಗಡೆಯೇ ಬಗ್ಗಿ ನೋಡುತ್ತ ರೈಲು ಕಂಬಿಯ ಪಕ್ಕದಲ್ಲೇ ನಡೆದುಕೊಂಡು ಹೋದೆ. ನಾನೆಷ್ಟು ಸತ್ಯವಾಗಿ ಇಲ್ಲಿದ್ದೇನೋ ಅಷ್ಟೇ ಸತ್ಯವಾಗಿ, ಆಣೆ ಯಿಟ್ಟು ಹೇಳುತ್ತೇನೆ ಸ್ವಾಮಿ, "ನಿನ್ನ ಮಗು ರೈಲಿಗೆ ಸಿಕ್ಕಿ ಸತ್ತಾಗ ಹೇಗಿರುತ್ತೆ ನೋಡಿದೆಯಾ ?" ಎಂದು ಯಾರೋ ವಿಕಾರವಾಗಿ ವಿಕಟ ವಾಗಿ ನುಡಿದುದು ನನಗೆ ಕೇಳಿಸಿತು.

ಈ ಹಾಳು ಚಾಕರಿ ಬಿಟ್ಟು ಬಿಡು, ಮತ್ತೆ ರೈಲು ಗೇಟಿನ ಕಡೆ ತಿರುಗಿ ನೋಡುವುದೇ ಬೇಡ ಎಂದು ನನ್ನ ಹೆಂಡತಿ ಇಷ್ಟಿಲ್ಲದೆ ಹೇಳಿ ದಳು. ಆದರೆ ಅಷ್ಟು ಸುಲಭವಾಗಿ ತೀರ್ಮಾನ ಮಾಡಿಬಿಡುವ ಹಾಗಿರ ಲಿಲ್ಲ. ಕೊಪ್ಪಲಿನಲ್ಲಿ ಒಂದು ಮನೆ ಮಾಡಿ ಹೆಂಡತಿಯನ್ನೂ ಎರಡನೆಯ ಮಗುವನ್ನೂ ಅಲ್ಲಿಗೆ ಕಳುಹಿಸಿದೆ.

ರೈಲು ಗೇಟಿನ ಹತ್ತಿರದ ಮನೆಯಲ್ಲಿ ನಾನೊಬ್ಬನೇ ಇರುತ್ತಿದ್ದೆ. ರಾತ್ರಿಯ ಹೊತ್ತು ನಿದ್ದೆಯೇ ಹತ್ತುತ್ತಿರಲಿಲ್ಲ ಸ್ವಾಮಿ. ರಾತ್ರಿಯ ರೈಲನ್ನು ಎದುರುಗೊಳ್ಳುವುದಕ್ಕೆ ಹೋದಾಗ ಮಕ್ಕಳು ಗೋಳಾಡಿದ ಸದ್ದು, ಯಾರೋ ಮಾತಾಡಿದ ಸದ್ದು ಎಲ್ಲವೂ ಕೇಳಿಸುತ್ತಿತ್ತು. ಇಪ್ಪತ್ತು ದೆವ್ವಗಳು ಒಂದೇಸಲ ಓಡಿ ಬಂದು ಎಲ್ಲಿ ನನ್ನ ಬಾಗಿಲನ್ನು ತಟ್ಟುತ್ತ ವೆಯೋ ಎಂಬ ಭಯದಿಂದ ಸದಾ ಎದ್ದು ಕೂತಿರುತ್ತಿದ್ದೆ ರಾತ್ರಿಯೆಲ್ಲ. ಒಂದಲ್ಲ ಒಂದು ರಾತ್ರಿ ಭಯಕ್ಕೇ ಸತ್ತು ಹೋಗುತ್ತೇನೆ ಎನಿಸುವುದು ಆಗಾಗ. ಆದರೆ ಒಂದು ಧೈರ್ಯ ಮಾತ್ರ ಇತ್ತು ನಮಗೆ—ಎರಡನೆಯ ಹುಡುಗ ಭದ್ರವಾಗಿದ್ದ ಕೊಪ್ಪಲಲ್ಲಿ. ರೈಲು ಕಂಬಿಯಿಂದ ದೂರದಲ್ಲಿ.

ಒಂದು ವರ್ಷದ ಕಾಲ ಏನೂ ಚಿಂತೆಯಿರಲಿಲ್ಲ.

ನನ್ನ ಹೆಂಡತಿಗೆ ತಿಂಗಳು ತುಂಬಿತ್ತು. ಏನೋ ಆಗಿ, ಆಸ್ಪತ್ರೆಗೆ ಸೇರಿಸಬೇಕಾಯಿತು. ಅವಳು ಆಸ್ಪತ್ರೆಯಲ್ಲಿದ್ದುದರಿಂದ ಹುಡುಗನನ್ನು ನಾನೇ ನೋಡಿಕೊಳ್ಳಬೇಕಾಯಿತು.

ಹಗಲುಹೊತ್ತೆಲ್ಲ ಅವನನ್ನು ನನ್ನ ಹತ್ತಿರವೇ ಇಟ್ಟುಕೊಂಡಿದ್ದು, ರಾತ್ರಿಯಹೊತ್ತು ಕೊಪ್ಪಲು ಮನೆಗೆ ಕಳುಹಿಸಿಬಿಡುತ್ತಿದ್ದೆ. ಪಕ್ಕದ ಮನೆಯ ಹೆಂಗಸು ಅವನನ್ನು ನೋಡಿಕೊಳ್ಳುತ್ತಿದ್ದಳು. ಆ ಹೆಂಗಸಿಗೆ ಬತ್ತದ ಮಿಷನ್ನಿನಲ್ಲಿ ಕೆಲಸ. ಹಗಲು ಆ ವೇಳೆಗೇ ಹೋಗಿ, ಕತ್ತಲಾದ ಮೇಲೆ ಹಿಂದಿರುಗಿ ಬರುತ್ತಿದ್ದಳು. ಬರುವ ದಾರಿಯಲ್ಲಿ ನನ್ನ ಹತ್ತಿರ ದಿಂದ ಮಗುವನ್ನು ಕರೆದುಕೊಂಡು ಮನೆಗೆ ಹೋಗುತ್ತಿದ್ದಳು. ಹಗಲು ಹೊತ್ತು ಮಗುವನ್ನು ನನ್ನ ಹತ್ತಿರವೇ ಇಟ್ಟುಕೊಳ್ಳಬೇಕಾಗಿತ್ತು. ಬೇರೆ ದಿಕ್ಕೇ ಇರಲಿಲ್ಲ. ಸೂರ್ಯನ ಬೆಳಕಿರುವಾಗ ಈ ರೀತಿಯ ವಿಷಯಕ್ಕೆಲ್ಲ ಯಾರೂ ಭಯಬೀಳುವುದಿಲ್ಲ. ಆದರೂ ಶಿವನಾಣೆ ಹೇಳುತ್ತೇನೆ, ಗೇಟನ್ನು ಮುಚ್ಚುವುದಕ್ಕೆ ಹೋದಾಗಲೆಲ್ಲ ಮಗುವನ್ನು ಮನೆಯಲ್ಲಿ ಕೂಡಿ ಬೀಗ ಹಾಕಿಕೊಳ್ಳುತ್ತಿದ್ದೆ.

ಇದೇ ದಿನ, ಐದು ವರ್ಷಗಳ ಹಿಂದೆ, ದೊಡ್ಡ ಸ್ಟೇಷನ್ನಿನಿಂದ

ಸಾಯಂಕಾಲ ಐದು ಗಂಟೆಯ ಎಕ್ಸ್‌ಪ್ರೆಸ್ ಬಂಡಿ ಬರುವುದರಲ್ಲಿತ್ತು. ಹುಡುಗನನ್ನು ಮಾಮೂಲಿನಂತೆ ಮನೆಯಲ್ಲಿ ಕೂಡಿ ಬೀಗಹಾಕಿಕೊಂಡು ಗೇಟು ಮುಚ್ಚುವುದಕ್ಕೆ ಬಂದೆ ಸ್ವಾಮಿ. ರೈಲು ನನ್ನಿಂದ ಹತ್ತು ಗಜ ದೂರದಲ್ಲಿದೆಯೆನ್ನುವಾಗ ನೋಡುತ್ತೇನೆ. ಮಗು ಮೆಟ್ಟಿಲ ಮೇಲೆ ನಿಂತಿದ್ದಾನೆ. ಮನೆಯ ಬೀಗದ ಕೈ ನನ್ನ ಕೈಯಲ್ಲೇ ಇದೆ. ಹುಚ್ಚು ಹಿಡಿದವನಂತೆ ಕೈಯನ್ನು ಬೀಸಿ, ರೈಲನ್ನು ನಿಲ್ಲಿಸಬೇಕೆಂದು ಕೂಗಿಕೊಂಡು ಹುಡುಗನ ಕಡೆಗೆ ಓಡಿದೆ. ಆದರೆ ಹುಡುಗ ರೈಲಿನ ಕಡೆಗೆ ಹಾರಿದ. ಬ್ರೇಕು ಹಾಕಿದರು. ಆದರೆ ಹುಡುಗನ ಮೈ ಮೇಲೆ ನಿಂತಿತು ರೈಲು.

ನನ್ನ ಹೆಂಡತಿಗೆ ಸುದ್ದಿ ಮುಟ್ಟಿತು, ಹುಟ್ಟಿದ ಮಗು ಹೊಟ್ಟೆಯಲ್ಲೇ ಸತ್ತು ಹೋಗಿತ್ತು. ಅವಳೂ ತೀರಿಕೊಂಡಳು.

ಇನ್ನು ಆ ಸ್ಥಳದಲ್ಲಿರುವುದು ನನ್ನ ಕೈಯ್ಯಲ್ಲಾಗಲಿಲ್ಲ. ಯಾರು ನನಗೆ ಕೆಲಸ ಕೊಟ್ಟಿದ್ದರೋ ಅವರಿಗೇ ಅದನ್ನು ಕೊಟ್ಟು ಬಿಟ್ಟೆ. ಈಗ ಯಾರಾದರೂ ಒಂದು ಕಾಸನ್ನೋ ಒಂದು ಹಿಡಿ ಅನ್ನವನ್ನೋ ನನ್ನ ಕಡೆ ಎಸೆದರೆ ಅಷ್ಟೇ ಸಾಕು ನನಗೆ.

ಪ್ರತಿ ನಿತ್ಯವೂ ನಡುರಾತ್ರಿಯಲ್ಲಿ ಆ ರೈಲು ಗೇಟಿಗೆ ಹೋಗಿ ನನ್ನ ಹೆಂಡತಿ ಮಕ್ಕಳನ್ನು ನೋಡಿಕೊಂಡು ಬರುತ್ತೇನೆ. ಆ ಹುಚ್ಚಿಯೂ ಆಗಾಗ ಬರುತ್ತಾಳೆ. ಏನೇನೋ ಮಟಗುಟ್ಟುತ್ತಾಳೆ. ಎಲ್ಲರ ಮುಖದೊಳಗೂ ಇಣಿಕಿ ನೋಡುತ್ತಾಳೆ. ಅವಳು ತುಂಬ ಸಾಧು. "ಅಯ್ಯೋ ಪಾಪ" ಎಂದರೆ ಸಾಕು ಕುರಿಮರಿಯಂತೆ ತಲೆ ತಗ್ಗಿಸಿಕೊಂಡು ಹೊರಟು ಹೋಗುತ್ತಾಳೆ. ಆದರೆ ಈ ಒಂದು ದಿನ ಮಾತ್ರ ಅವಳು ಮಹಾ ಕಾಳಿಯ ಅವತಾರವಾಗಿರುತ್ತಾಳೆ. ಅವಳನ್ನು ತಡೆಯುವುದು ಅಸಾಧ್ಯ...."

* * * *

ನನ್ನ ಮೈಯ್ಯಲ್ಲಿ ಸ್ವಲ್ಪ ನಡುಕ ಹುಟ್ಟಿತು. ಕೊರೆಯುವಂಥ ಗಾಳಿ ಆಗತಾನೆ ಬೀಸಿದುದರಿಂದ ಹಾಗಾಗಿರಬಹುದು. ಆಗ ಹೊತ್ತೆಷ್ಟೋ ನನಗೆ ತಿಳಿಯಲಿಲ್ಲ. ರಾತ್ರಿ ಎಂಟರಿಂದ ಹನ್ನೆರಡರವರೆಗೆ ಎಷ್ಟಾದರೂ

ಆಗಿರಬಹುದು ಎನ್ನುವಹಾಗಿತ್ತು. ಈ ವೇಳೆಗೆ ಕೆರೆಯ ಉತ್ತರದ ಏರಿಯ ಮೇಲಿರುವ ಯಲವಾಲ ರಸ್ತೆಗೆ ಬಂದಿದ್ದೆ. ರಸ್ತೆಯು ಜನಶೂನ್ಯವಾಗಿತ್ತು.

ನನ್ನ ಸಂಗಡಿಗನು ನನ್ನ ಹಿಂದೆಯೇ ಬರುತ್ತಿದ್ದ. ಕತೆಯಲ್ಲಿ ಸ್ವಲ್ಪ ಭಾಗ ಹೇಳುವನು. ಬಹು ಕಾಲ ಸುಮ್ಮನಿರುವನು. ಮತ್ತೆ ಕತೆ ಆರಂಭಿಸುವನು. ಕತೆ, ಮೌನ. ಕತೆ, ಮೌನ. ಈಗವನು ಅಂಥ ಮೌನವನ್ನು ತಾಳಿದ್ದನು. ನಾನೂ ಮಾತಿಲ್ಲದೆ ಅವನು ಹೇಳಿದ ಕತೆ ಯನ್ನು ಜೀರ್ಣಿಸಿಕೊಳ್ಳುತ್ತಿದೆ.

ಲೇಕ್‌ವ್ಯೂ ಬಂಗಲೆಯಿಂದ ನೂರು ಗಜದ ದೂರದಲ್ಲಿ ರಸ್ತೆ ಡೊಂಕಾಗಿ ಬಳಸುತ್ತದಲ್ಲ, ಅಲ್ಲಿಗೆ ಬಂದಿದ್ದೆವು. "ಅಲ್ಲ, ಪ್ರತಿ ರಾತ್ರಿಯೂ ಹೋಗಿ ದೆವ್ವಗಳ ಕೈಯಲ್ಲಿ ಮಾತನಾಡಿಕೊಂಡು ಬರುತ್ತೀಯಾ ?" ಎಂದೆ. ಉತ್ತರ ವೀಯುವನೆಂದು ಕಾದು ನೋಡಿದೆ. ಉತ್ತರ ಬರಲಿಲ್ಲ. ಮತ್ತೊಮ್ಮೆ ಅದೇ ಪ್ರಶ್ನೆಯನ್ನು ಕೇಳಿ ತಿರುಗಿ ನೋಡಿದೆ. ನನ್ನ ಹಿಂದೆ ಯಾರೂ ಇರಲಿಲ್ಲ. ಒಂದು ನಿಮಿಷ ದಿಗ್ಭ್ರಮೆಯಾಗಿ ನಿಂತೆ. ಆಮೇಲೆ ಒಂದೇ ಉಸಿರಿನಲ್ಲಿ ಓಡತೊಡಗಿದೆ. ಕೇವಲ ಅರ್ಧ ಫರ್ಲಾಂಗ್ ದೂರ ದಲ್ಲೇ ಇದ್ದ ಲೇಕ್‌ವ್ಯೂ ಬಂಗಲೆಯ ಬಳಿಗೆ ಬಂದೆ. ಅಲ್ಲಿ ಬೇಕಾದಷ್ಟು ಪ್ರಕಾಶಮಾನವಾದ ದೀಪಗಳಿದ್ದುವು. ಅಲ್ಲದೆ ಬಂದೂಕು ಹಿಡಿದ ಸಿಪಾಯಿ ಬೇರೆ ಬಾಗಿಲಲ್ಲಿ ನಿಂತಿದ್ದ.... ನನ್ನ ಸಂಗಡಿಗ ಬರುತ್ತಾ ನೇನೋ ಎಂದು ಕೊಂಚ ಹೊತ್ತು ಅಲ್ಲಿ ನಿಂತು ರಸ್ತೆಯ ಕಡೆಯೇ ನೋಡುತ್ತಿದ್ದೆ. ಅವನ ಸುಳಿವೇ ಇರಲಿಲ್ಲ.

ಮನೆಗೆ ಹೋದಮೇಲೆ ನನಗೆ ಹೊಳೆಯಿತು : ಬಹುಶಃ ಯಲವಾಲ ರಸ್ತೆಯಿಂದ ಪಡವಾರಹಳ್ಳಿಗೆ ಹೋಗುವ ಅಡ್ಡರಸ್ತೆಯಲ್ಲಿ ಅವನು ಹೊರಟು ಹೋಗಿರಬಹುದು, ಅಥವಾ ರಸ್ತೆಯ ಪಕ್ಕದಲ್ಲಿದ್ದ ಭಾರಿಯ ಅರಳಿಯ ಮರದ ಕರಾಳವಾದ ನೆರಳಲ್ಲಿ ನಿಂತುಬಿಟ್ಟಿರಬಹುದು ಎಂಬುದಾಗಿ.

---

# ಆಲದ ಮರದ ಕೆಳಗೆ

ಮೆಂಪಿಕಾಡಿನ ಮಡಿಲಲ್ಲಿ ಹುದುಗಿಕೊಂಡಿದ್ದ ಸೋವುಲ ಗ್ರಾಮದ ಜನಸಂಖ್ಯೆ ಮುನ್ನೂರಕ್ಕಿಂತ ಕಡಿಮೆಯಾಗಿತ್ತು. ಯಾವ ವಿಥದಲ್ಲಿ ನೋಡಲಿ, ಗ್ರಾಮಸುಧಾರಕನ ಮನಸ್ಸು ಕುಗ್ಗಬೇಕು, ಹಾಗಿತ್ತು ಸೋವುಲಹಳ್ಳಿಯ ನಟ್ಟನಡುವಿದ್ದ ಕೆರೆಯ ನೀರು ಅಡಿಗೆಗೆ, ಸ್ನಾನಕ್ಕೆ, ಎಮ್ಮೆ ತೊಳೆಯುವುದಕ್ಕೆ ಎಲ್ಲಕ್ಕೂ ಒದಗುತ್ತಿತ್ತು. ಆ ಕೆರೆಯನ್ನುವ ಕೆರೆಯೆನ್ನುವ ಬದಲು ಕೊಳಕು ನೀರಿನ ಕುಂಟೆ ಎಂದು ಕರೆದರೆ ಸರಿಯಾಗಿ ರುತ್ತಿತ್ತು. ಮಲೇರಿಯಾ, ಟೈಫಾಯಿಡ್, ಇನ್ನೂ ಏನೇನು ರೋಗರುಜಿನಗ ಳಿವೆಯೋ ಅವಕ್ಕೆಲ್ಲ ಅದು ತವರುಮನೆ. ಗುಡಿಸಿಲುಗಳನ್ನು ಕಟ್ಟುವುದರಲ್ಲಿ ಒಪ್ಪವಿರಲಿಲ್ಲ, ವಿನ್ಯಾಸವಿರಲಿಲ್ಲ. ಬೀದಿಗಳು ಡೊಂಕುಡೊಂಕಾಗಿ ಹರಿ ದಾಡುತ್ತ ಒಂದನ್ನೊಂದು ಕಿವಿಚಿದಂತೆ ಕಾಣುತ್ತಿದ್ದುವು. ಊರಿನ ಪೇಟೆ ಬೀದಿಯೇ ಕಸದ ಗುಂಡಿಯೂ ಆಗಿತ್ತು. ಗುಡಿಸಿಲುಗಳ ಹಿತ್ತಿಲಲ್ಲಿ ಹಸುರು ಬಣ್ಣದ ಪಾಚಿಕಟ್ಟಿದ ಕೊಚ್ಚೆ ನಿಂತಿತು.

ಹಾಗಿತ್ತು ಹಳ್ಳಿ. ಹಳ್ಳಿಯ ಜನ ಅಲ್ಲಿಯ ಕೊಳಕನ್ನು ಕಂಡರೂ ಲಕ್ಷ್ಯಕ್ಕೆ ತೆಗೆದುಕೊಳ್ಳದಂಥ ಮಂದಮತಿಗಳಾಗಿದ್ದಿರಬಹುದು. ಆದರೆ ಹಳ್ಳಿಯ ಅಂದ ಚೆಂದದ ಕಡೆ ಗಮನ ಕೊಡದಿದ್ದುದಕ್ಕೆ ಈ ಜಡತ್ವಕ್ಕಿಂತ ಪ್ರಬಲವಾದ ಕಾರಣವಿನ್ನೊಂದಿತ್ತು. ಅವರು ಸದಾಕಾಲವೂ ಅನಂತ ವಾದ ಮಾಯೆಯೊಂದರಲ್ಲಿ ತಲ್ಲೀನರಾಗಿರುತ್ತಿದ್ದರು. ಆ ಮಾಯೆಯ ಕರ್ತಾರನ ಹೆಸರು ನಂಬಿಯೆಂದು. ಅವನಿಗೆ ಅರವತ್ತು ಎಪ್ಪತ್ತು ವಯಸ್ಸಿರಬಹುದು. ಅಥವಾ ಎಂಬತ್ತೋ ನೂರ ಎಂಬತ್ತೋ? ಯಾರಿಗೆ ಗೊತ್ತು . . . ಹತ್ತಿರದ ಬಸ್‌ನಿಲ್ದಾಣ ಹತ್ತು ಮೈಲಿ ದೂರದಲ್ಲಿತ್ತು. ಬಾಹ್ಯಪ್ರಪಂಚದ ಸಂಬಂಧದಿಂದ ದೂರದಲ್ಲಿದ್ದ ಆ ಸ್ಥಳದಲ್ಲಿ ಕಾಲದ ಅಳತೆಯು ನಮಗೆ ಪರಿಚಿತವಾದ ಪ್ರಮಾಣದಲ್ಲಿರಲಾರದು. ವಯಸ್ಸೆಷ್ಟೆಂದು ನಂಬಿಯನ್ನು ಯಾರಾದರೂ ಕೇಳಿದರೆ ಹಿಂದೆಂದೋ ಒದಗಿದ್ದ ಕ್ಷಾಮವ

ನ್ನೋ, ಮುತ್ತಿಗೆಯನ್ನೋ ನೆನಸಿಕೊಂಡು ಆಗ ತಾನು ನೆಲದಿಂದ ಎಷ್ಟೆತ್ತರವಿದ್ದೆನೆಂಬುದಾಗಿ ತೋರಿಸುವನು.

ಬರೆದ ಅಕ್ಷರ ಅವನ ಅರಿವನ್ನು ಮೀರಿತ್ತು. ಈ ಅರ್ಥದಲ್ಲಿ ಅವನು ನಿರಕ್ಷರಕುಕ್ಷಿ.

ತಿಂಗಳಿಗೊಂದರಂತೆ ಅವನು ಮನಸ್ಸಿನಲ್ಲೇ ಒಂದು ಕತೆಯನ್ನು ಕಟ್ಟುತ್ತಿದ್ದನು. ಪ್ರತಿ ಕತೆಯನ್ನು ಹೇಳುವುದಕ್ಕೂ ಹತ್ತು ದಿನ ಹಿಡಿಯುತ್ತಿತ್ತು.

ಹಳ್ಳಿಯ ಕೊನೆಯಲ್ಲಿದ್ದ ಚಿಕ್ಕ ಗುಡಿಯೇ ಅವನ ಮನೆ. ಆ ಗುಡಿಯ ಯಜಮಾನನೆಂದು ಹೇಗೆ ಆತ ಕರೆದುಕೊಳ್ಳಲು ಆರಂಭಿಸಿದನೋ ಯಾರಿಗೂ ತಿಳಿಯದು. ಆದರೆ ಅನಾದಿ ಕಾಲದಿಂದ ಅವನು ಅಲ್ಲಿಯೇ ಇದ್ದ. ಚಿಕ್ಕ ಕಟ್ಟಡ ಆ ಗುಡಿ. ಕೆಂಪು ಪಟ್ಟೆಗಳ ಗೋಡೆಗಳು. ಗರ್ಭಗುಡಿಯಲ್ಲಿ ಶಕ್ತಿಯ ವಿಗ್ರಹವೊಂದಿತ್ತು. ಗುಡಿಯ ಮುಂಭಾಗದಲ್ಲಿ, ನಂಬಿ ವಾಸಿಸುತ್ತಿದ್ದನು. ಹಾಗೆ ನೋಡಿದರೆ, ಆತ ಎಲ್ಲಿ ಬೇಕಾದರೂ ವಾಸಿಸಬಹುದಾಗಿತ್ತು. ಏಕೆಂದರೆ ತನ್ನದೆಂದು ಕರೆದುಕೊಳ್ಳುವಂಥದೇನೂ ಇರಲಿಲ್ಲ ಅವನಿಗೆ. ಅವನಿಗಿದ್ದ ಐಶ್ವರ್ಯ ಸರ್ವಸ್ವವೆಂದರೆ, ಗುಡಿಯನ್ನು ಗುಡಿಸುವುದಕ್ಕೆಂದು ಇಟ್ಟುಕೊಂಡಿದ್ದ ಮೋಟು ಪೊರಕೆಯೊಂದು, ಒಂದು ಜತೆ ಪಂಚೆಗಳು, ಒಂದು ಅಂಗವಸ್ತ್ರ. ಗುಡಿಯ ಮುಂಭಾಗದಲ್ಲೆಲ್ಲ ಹಬ್ಬಿಕೊಂಡಿದ್ದ ಆಲದ ಮರದ ನೆರಳಲ್ಲಿ ಅವನು ದಿನದ ಬಹುಭಾಗವನ್ನು ಕಳೆಯುತ್ತಿದ್ದ. ಹಸಿವಾದಾಗ ಯಾವ ಮನೆಯ ಮೇಲೆ ಆತನ ದೃಷ್ಟಿ ಬೀಳುವುದೋ ಆ ಮನೆಗೆ ನುಗ್ಗಿ, ಎಲ್ಲರೊಡನೆ ಭೋಜನ ಪಂಙ್ತೆಯಲ್ಲಿ ಕುಳಿತುಕೊಳ್ಳುವನು. ಅವನಿಗೆ ಹೊಸ ಬಟ್ಟೆಗಳು ಬೇಕಾದಾಗ ಹಳ್ಳಿಯವರು ತಂದುಕೊಡುವರು. ಜತಗಾರರನ್ನು ಹುಡುಕಿಕೊಂಡು ಹೋಗಬೇಕಾದ ಆಗತ್ಯವೇ ಇರಲಿಲ್ಲ. ಏಕೆಂದರೆ, ಆಲದ ನೆರಳೇ ಊರ ಚಾವಡಿ. ಮುಂಜಾನೆಯಿಂದ ಮಧ್ಯರಾತ್ರಿಯವರೆಗೆ ಜನರೆಲ್ಲ ನಂಬಿಯನ್ನು ಹುಡುಕಿಕೊಂಡು ಬಂದು ಆತನ ಸುತ್ತ ಕುಳಿತುಕೊಳ್ಳುವರು. ಅವನಿಗೆ ಮನಸ್ಸು ತಿರುಗಿದರೆ ಅವರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳುವನು.

ತಾನೂ ಒಂದೆರಡು ಕತೆಗಳನ್ನೂ ಅನುಭವದ ಮಾತನ್ನೂ ಹೇಳುವನು. ಹಾಗಿಲ್ಲದಿದ್ದರೆ, ಅವರ ಕಡೆ ಜುಗುಪ್ಸೆಯಿಂದ ನೋಡಿ, "ನಾನು ಯಾರೆಂದು ಕೊಂಡಿದ್ದೀರಿ? ಮುಂದಿನ ಹುಣ್ಣಿಮೆಯ ದಿನ ಕತೆಯಿಲ್ಲದೆ ಹೋದರೆ ನನ್ನನ್ನು ದೂಷಿಸಬೇಡಿ. ನಾನು ತಪಸ್ಸು ಮಾಡದೆ ಹೋದರೆ ದೇವಿಯು ಕತೆ ಕೊಡುವಳೆ? ಕತೆಗಳೇನು ಗಾಳಿಯಲ್ಲಿ ಹಾರಾಡುತ್ತಿರುವುವೆಂದು ಕೊಂಡಿದ್ದೀರೋ?" ಎಂದು ಕೇಳಿ, ಅರಣ್ಯದ ಅಂಚಿಗೆ ಹೊರಟುಹೋಗಿ ಮರಗಳನ್ನೇ ದಿಟ್ಟಿಸಿ ನೋಡುತ್ತ ಕುಳಿತುಕೊಳ್ಳುವನು.

ಶುಕ್ರವಾರಗಳ ಸಂಜೆ ಹಳ್ಳಿಗೆ ಹಳ್ಳಿಯೇ ಗುಡಿಗೆ ಬರುವುದು, ಪೂಜೆಗಾಗಿ. ಆಗ ನಂಬಿ ಹತ್ತಾರು ಮಣ್ಣಿನ ಹಣತೆಗಳನ್ನು ಹೊತ್ತಿಸಿ ಗರ್ಭಗುಡಿಯ ಹೊರಗಿನ ಹೊಸಿಲಸುತ್ತ ಜೋಡಿಸುವನು. ಗುಡಿಯ ಹಿಂದೆ ಯಥೇಚ್ಛವಾಗಿ ಬೆಳೆದಿದ್ದ ಹೂಗಿಡಗಳಿಂದ ಬಣ್ಣ ಬಣ್ಣದ ಹೂಗಳನ್ನು ಕೊಯ್ದು ತಂದು ವಿಗ್ರಹವನ್ನು ಅಲಂಕರಿಸುವನು. ಅವನೇ ಅರ್ಚಕ. ಹಳ್ಳಿಗರು ತಂದ ಹೂ ಹಣ್ಣುಗಳನ್ನು ತಾನೇ ದೇವಿಗೆ ಒಪ್ಪಿಸುವನು

ಯಾವ ರಾತ್ರಿ ಹೇಳಲು ಒಂದು ಕತೆಯಿರುತ್ತಿತ್ತೋ ಅಂತಹ ರಾತ್ರಿಗಳಲ್ಲಿ ಸಣ್ಣ ಹಣತೆಯೊಂದನ್ನು ಹೊತ್ತಿಸಿ ಆಲದ ಮರದ ಕಾಂಡದಲ್ಲಿದ್ದ ಪುಟ್ಟ ಪೊಟರೆಯಲ್ಲಿರಿಸುವನು. ಕೆಲಸ ಮುಗಿಸಿ ಮನೆಗೆ ಹಿಂದಿರುಗುವಾಗ ಗ್ರಾಮಸ್ಥರು ಅದನ್ನು ಗಮನಿಸಿ, ಮನೆಗೆ ಓಡಿ, ತಮ್ಮ ತಮ್ಮ ಹೆಂಡಿರಿಗೆ ಹೇಳುವರು; "ಬೇಗ, ಬೇಗ, ಊಟವನ್ನು ಜಾಗ್ರತೆಯಾಗಿ ಮುಗಿಸಿ. ಕತೆಗಾರನು ಕರೆಯುತ್ತಿದ್ದಾನೆ" ಎಂಬುದಾಗಿ. ಪಕ್ಕದ ಬೆಟ್ಟದ ಹಿಂದುಗಡೆಯಿಂದ ಚಂದ್ರನು ಮೇಲಕ್ಕೇಳುವ ವೇಳೆಗೆ ಗಂಡಸರು, ಹೆಂಗಸರು ಮಕ್ಕಳು ಆಲದ ಮರದಡಿಯಲ್ಲಿ ಸೇರುವರು. ಕತೆಗಾರ ಆಗಲೇ ಬಾರನು. ಗರ್ಭಗುಡಿಯಲ್ಲಿ ದೇವಿಯ ಮೂರ್ತಿಯ ಮುಂದೆ ಕಣ್ಣು ಮುಚ್ಚಿಕೊಂಡು ಧ್ಯಾನದಲ್ಲಿ ಮಗ್ನನಾಗಿ ಕುಳಿತಿರುವನು. ಎಷ್ಟು ಹೊತ್ತು ಇಷ್ಟವೋ ಅಷ್ಟು ಹೊತ್ತು ಹಾಗೆ ಕುಳಿತಿದ್ದು, ಅನಂತರ ವಿಭೂತಿ ಕುಂಕುಮಗಳಿಂದ ಹೊಳೆಹೊಳೆಯುವ ಹಣೆಯೊಡನೆ ಹೊರಗೆ ಬಂದು ಗುಡಿಯ ಎದುರಿನಲ್ಲಿದ್ದ ಕಲ್ಲುಮಂಟಪದಲ್ಲಿ ಮಂಡಿಸುವನು. ಕತೆಯನ್ನು ಮೊದಲು

ಮಾಡುತ್ತಿದ್ದುದು ಪ್ರಶ್ನೆಯೊಡನೆ. ಅತಿ ದೂರದಲ್ಲಿದ್ದ ಯಾವುದೋ ಅನಿರ್ದಿಷ್ಟವಾದ ಸ್ಥಳದ ಕಡೆ ತೋರುಬೆರಳನ್ನು ಆಡಿಸಿ, ಹೇಳುವನು. "ಒಂದು ಸಾವಿರ ವರ್ಷಗಳ ಹಿಂದೆ, ಈ ದಿಕ್ಕಿನಲ್ಲಿ, ಒಂದು ಹರಿದಾರಿಯ ದೂರದಲ್ಲಿ, ಏನಿತ್ತೆಂದು ನಿಮಗೆ ಗೊತ್ತೋ? ಈಗಿರುವಂತೆ ಕತ್ತೆಗಳು ಹೊರಳಾಡುವ ಕಸದ ಕುಪ್ಪೆಯಾಗಿರಲಿಲ್ಲ ಅಂದು. ಆಗ ಅದು ರಾಜಧಾನಿ ಯಾಗಿತ್ತು. ದೊರೆಯ ಹೆಸರು . . . ." ದೊರೆಯು ದಶರಥನೋ, ವಿಕ್ರಮಾದಿತ್ಯನೋ, ಅಶೋಕನೋ, ಆಗ ಆ ಮುದುಕನ ಮನಸ್ಸಿಗೆ ಯಾರ ಹೆಸರು ಹೊಳೆಯುವುದೋ ಅವನಾಗಿರುತ್ತಿದ್ದ. ರಾಜಧಾನಿಯ ಹೆಸರು ಕಪಿಲವೋ ಕೃದಾಪುರವೋ ಏನೋ ಒಂದು. ಹೀಗೆ ಆರಂಭಿಸಿ, ಒಂದು ಗಳಿಗೆಯೂ ನಿಲ್ಲಿಸದೆ, ತಡೆಬಡೆಯಿಲ್ಲದೆ, ಗಂಗಾ ಪ್ರವಾಹದಂತೆ ಮೂರು ಗಂಟೆಗಳ ಕಾಲ ಹೇಳುತ್ತ ಹೋಗುವನು. ಈ ವೇಳೆಗೆ ಅರಸನ ಅರಮನೆಯು ಇಟ್ಟಿಗೆ ಇಟ್ಟಿಗೆಯಾಗಿ ಎದ್ದಿರುತ್ತಿತ್ತು. ನೂರಾರು ಸಾವಿರಾರು ಸಾಮಂತ ರಾಜರು, ಮಂತ್ರಿಗಳು, ಪಂಡಿತರು, ಇವರಿಂದ ತುಂಬಿ ರಾಜಸ್ಥಾನವು ಕಂಗೊಳಿಸುತ್ತಿತ್ತು. ಅರಮನೆಯ ಮತ್ತೊಂದು ಭಾಗದಲ್ಲಿ ಪ್ರಪಂಚದ ಎಲ್ಲ ಸಂಗೀತಗಾರರೂ ಸೇರಿ ಸುಮಧುರ ಗಾನದಿಂದ ಕರ್ಣಾನಂದವನ್ನು ಕೊಡುತ್ತಿರುವರು. ಆ ಹಾಡುಗಳನ್ನೆಲ್ಲ ಎದುರಿಗೆ ನೆರೆತ ಶ್ರಾವಕ ಸಮೂಹಕ್ಕಾಗಿ ನಂಬಿ ಮತ್ತೆ ಹಾಡುವನು: ನೃಪಸೌಧದ ಗೋಡೆಗಳ ಮೇಲೆ ತಗುಲುಹಾಕಿದ್ದ ಚಿತ್ರಗಳನ್ನೂ ಆಯುಧಗಳನ್ನೂ ಅಧೀನರು ಅರ್ಪಿಸಿದ ಕಪ್ಪಕಾಣಿಕೆಗಳನ್ನೂ ನಂಬಿ ಒಂದೊಂದಾಗಿ ಬಣ್ಣಿಸುವನು......

ಮಹಾಕಾವ್ಯದ ಪ್ರಮಾಣದಲ್ಲಿರುತ್ತಿತ್ತು ನಂಬಿಯ ಕತೆಗಳ ಕಟ್ಟುವಿಕೆ. ಮೊದಲ ದಿನ ಕತೆಯ ರಂಗ ಮಾತ್ರ ಸಿದ್ಧವಾಗಿರುತ್ತಿತ್ತು. ಯಾರು ಯಾರು ಕತೆಯಲ್ಲಿ ಬರುವರೋ ಏನಾಗುವುದೋ ಎಂಬ ಕಲ್ಪನೆಮಾಡಿಕೊಳ್ಳುವುದು ಸಹ ಯಾರಿಗೂ ಸಾಧ್ಯವಿರುತ್ತಿರಲಿಲ್ಲ. ಚಂದ್ರನು ಮೆಂಪಿ ಅರಣ್ಯದ ಮರಗಳ ಮರೆಯಲ್ಲಿ ಮಾಯವಾಗುವ ವೇಳೆಗೆ ನಂಬಿಯು "ಸ್ನೇಹಿತರೇ, ಇಂದಿಗೆ ಇಷ್ಟು, ಸಾಕೆಂದು ತಾಯಿ ಹೇಳುತ್ತಾಳೆ.'' ಎಂದು ಹೇಳಿ, ತಟಕ್ಕನೆ ಎದ್ದು, ಒಳಗೆ ಹೋಗಿ, ಮಲಗಿ, ಗುಂಪಿನ ಗುಜುಗುಜು ಅಡಗುವುದಕ್ಕಿಂತ ಎಷ್ಟೋ ಮುಂಚೆಯೇ ನಿದ್ದೆ ಹೋಗಿಬಿಡುವನು.

ಎರಡು ಮೂರು ದಿನಗಳ ಮೇಲೆ ಮತ್ತೆ ಆಲದಮರದ ಗೂಡಿನಲ್ಲಿ ಹಣತೆ ಕಾಣಿಸಿಕೊಳ್ಳುವುದು. ಹೀಗೆ ಶುಕ್ಲಪಕ್ಷದ ಉದ್ದಕ್ಕೂ ಕಥೆ ಮುಂದುವರಿಯುವುದು. ದೊರೆಗಳು, ಸಾಹಸಿಗಳು, ಮಹಾ ವೀರರು, ನೀಚರು, ಅಪ್ಸರೆಯರು, ಮನುಷ್ಯ ರೂಪಧರಿಸಿದ ದೇವತೆಗಳು, ಸಂತರು, ಸಾಧುಗಳು, ಕಟುಕರು, ಕೊಲೆಪಾತಕರು ಒಬ್ಬರಾದಮೇಲೊಬ್ಬರು ಭುಜಕ್ಕೆಭುಜ ಉಜ್ಜಿಕೊಂಡು ಓಡಾಡುವರು ಆಲದಮರದ ಕೆಳಗೆ ಸೃಷ್ಟಿಸಲ್ಪಟ್ಟ ಈ ಲೋಕದಲ್ಲಿ. ರಮಣೀಯವಾದ ಲಯದಲ್ಲಿ ನಂಬಿಯ ದನಿಯು ಏರುವುದು ಇಳಿಯುವುದು. ಆ ವೇಳೆಯೂ ತಿಂಗಳಬೆಳಕೂ ಒಟ್ಟುಗೂಡಿ ನಂಬಿಯ ಯಕ್ಷಿಣಿಯನ್ನು ಪೂರ್ಣಗೊಳಿಸುತ್ತಿದ್ದುವು. ನಂಬಿ ನಕ್ಕಾಗ ಹಳ್ಳಿಗರೂ ನಗುವರು. ಅವನೊಡನೆ ತಾವೂ ಅಳುವರು. ಕಥಾನಾಯಕರನ್ನು ಮೆಚ್ಚುವರು, ಶೂರರನ್ನು ಹೊಗಳುವರು, ನೀಚರನ್ನು ತೆಗಳುವರು, ಒಳಸಂಚು ನಡೆಸಿದವನಿಗೆ ಮೊದಲಲ್ಲಿ ಜಯ ದೊರೆತರೆ ಸಿಟ್ಟುಸಿರಿಡುವರು, ಕಥೆಯು ಸುಖವಾಗಿ ಮಂಗಳದಲ್ಲಿ ಮುಕ್ತಾಯಗೊಳ್ಳಲೆಂದು ದೇವರಿಗೆ ಕೈಮುಗಿದು ಮೊರೆಯಿಡುವರು.........

ಕಥೆ ಮುಗಿದ ಕಡೆಯ ದಿನ, ಸೇರಿದ್ದವರೆಲ್ಲರೂ ಗರ್ಭಗುಡಿಯ ಬಳಿ ಹೋಗಿ ದೇವಿಯ ಮುಂದೆ ಅಡ್ಡಬೀಳುವರು...............

ಮುಂದಿನ ಚಂದ್ರನು ಬೆಟ್ಟದ ಬೆನ್ನ ಹಿಂದಿನಿಂದ ಇಣಿಕಿನೋಡುವ ವೇಳೆಗೆ ನಂಬಿ ಮತ್ತೊಂದು ಕತೆಯೊಡನೆ ಸಿದ್ಧವಾಗಿರುವನು. ಒಂದು ಕತೆಯನ್ನು ಹೋಲುವ ಮತ್ತೊಂದು ಕತೆಯನ್ನು ಹೇಳಿದುದಿಲ್ಲ ಆವನು. ಒಬ್ಬ ವ್ಯಕ್ತಿಯಂತೆ ಇನ್ನೊಬ್ಬನನ್ನು ತಂದುದಿಲ್ಲ. ಒಂದು ಸನ್ನಿವೇಶದಂಥ ಮತ್ತೊಂದು ಸನ್ನಿವೇಶವನ್ನು ಕಲ್ಪಿಸಿದುದಿಲ್ಲ. ಹಳ್ಳಿಯವರಿಗೆಲ್ಲ ನಂಬಿಯೆಂದರೆ ಒಂದು ಬಗೆಯ ಪವಾಡವೆಂಬ ನಂಬಿಕೆ. ಆತ ಹೇಳಿದ ಚಾಣ್ಮೆಯ ಮಾತನ್ನು ತಮ್ಮ ತಮ್ಮ ಸಂಭಾಷಣೆಯಲ್ಲಿ ಉದಹರಿಸುವರು. ಮಿಕ್ಕೆಲ್ಲ ವಿಧದಲ್ಲೂ ಅವರ ಬಾಳು ಎಷ್ಟೇಕಷ್ಟದಿಂದ ಕೂಡಿದ್ದರೂ, ಎಷ್ಟೇ ಅನಾಕರ್ಷಣೀಯವಾಗಿದ್ದರೂ, ಈ ಒಂದರಿಂದ ಅವರು ಯಾವುದೋ ಉನ್ನತವಾದ ಮಟ್ಟದಲ್ಲಿ ಜೀವಿಸಿರುತ್ತಿದ್ದರು.

ಈ ರೀತಿ ವರ್ಷಗಟ್ಟಲೆ ನಡೆದಿತ್ತು. ಒಂದು ದಿನ ಅವನು ಹಣತೆ ಯನ್ನು ಹಚ್ಚಿ ಮರದಲ್ಲಿಟ್ಟನು. ಜನ ಬಂದರು. ಮುದುಕನು ತನ್ನ ಪೀಠ ವನ್ನೇರಿ ಕತೆಯನ್ನು ಆರಂಭಿಸಿದನು. "........ವಿಕ್ರಮಾದಿತ್ಯ ಚಕ್ರವರ್ತಿ ರಾಜ್ಯಭಾರವನ್ನೆ ಸಗುತ್ತಿದ್ದ ಕಾಲದಲ್ಲಿ, ಆತನ ಮಂತ್ರಿಯ ಹೆಸರು........" ವಾಕ್ಯ ಅಲ್ಲಿಗೇ ನಿಂತುಹೋಯಿತು. ಮುಂದುವರಿಯುವುದಕ್ಕೆ ಸಾಧ್ಯವಾಗ ಲಿಲ್ಲ. ಮಾತು ಬತ್ತಿಹೋದಹಾಗಾಯಿತು. ಮತ್ತೆ ಹೊಸದಾಗಿ ಆರಂಭಿ ಸಿದ. "ಒಂದಾನೊಂದು ಕಾಲದಲ್ಲಿ.........ಒಂದಾನೊಂದು ಕಾಲದಲ್ಲಿ." ...........ಇದನ್ನೇ ಮತ್ತೆ ಹೇಳಿದ ಆ ಮೇಲೆ ತನಗೊಬ್ಬನಿಗೇ ಕೇಳುವ ಹಾಗೆ ಏನೋ ಹೇಳಿಕೊಂಡ. ಶಬ್ದ ಸಂಪತ್ತಿಯೇ ಉಡುಗಿಹೋಯಿತು. ಸಂಕಟದ ದನಿಯಲ್ಲಿ "ಅಯ್ಯೋ ನನಗೇನು ಬಂತು?" ಎಂದು ಕೇಳಿ. "ಓ ತಾಯೇ, ಮಹಾ ಮಾತೆಯೇ ನಾನೇಕೆ ಮುಗ್ಗರಿಸುತ್ತಿದ್ದೇನೆ? ಏಕೆ ತಡವರಿಸುತ್ತಿದ್ದೇನೆ? ಕತೆ ನನಗೆ ಗೊತ್ತು. ಒಂದು ಕ್ಷಣದ ಹಿಂದೆ ಕತೆ ಯೆಲ್ಲ ನನ್ನ ಕಣ್ಣ ಮುಂದಿತ್ತು. ಯಾವುದರ ವಿಷಯವಾಗಿತ್ತು ಅದು? ನನಗೇನಾಗಿದೆಯೋ ನನಗೇ ಗೊತ್ತಿಲ್ಲವಲ್ಲಾ!" . . . . ಅವನ ಯಾತನೆ ಯನ್ನು ಕಂಡು ಜನ "ನಿನಗೆ ಯಾವಾಗ ಸ್ಫೂರ್ತಿ ಬರುತ್ತದೋ ಆಗ ಹೇಳು. ಬಹುಶಃ ನೀನು ತುಂಬ ದಣಿದಿರಬೇಕು" ಎಂದರು.

"ಬಾಯಿ ಮುಚ್ಚಿ! ನಾನೇನು ಸೋತುಹೋಗಿದ್ದೇನೋ? ಒಂದು ನಿಮಿಷ ತಡೆಯಿರಿ. ಕತೆಯನ್ನು ಹೇಳುತ್ತೇನೆ" ಎಂದು ಕೂಗಿಕೊಂಡ. ಉತ್ಸುಕತೆಯಿಂದ ಕೂಡಿದ ಅನೇಕ ಮುಖಗಳು ಅವನ ಕಡೆಯೇ ನೋಡಿ ದುವು. "ನನ್ನ ಕಡೆ ನೋಡಬೇಡಿ" ಎಂದವನು ಅರಚಿಕೊಂಡ. ಯಾರೋ ಒಬ್ಬರು ಅವನಿಗೆ ಒಂದು ಬಟ್ಟಲು ಹಾಲು ತಂದುಕೊಟ್ಟರು. ಜನ ತಾಳ್ಮೆಯಿಂದ ಕಾಯ್ದರು. ಇದು ಹೊಸ ಅನುಭವ. ಕೆಲವರು ತಮ್ಮ ಸಹಾನುಭೂತಿಯನ್ನು ಗಟ್ಟಿಯಾಗಿಯೇ ಹೇಳಿದರು. ಕೆಲವರು ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳ ತೊಡಗಿದರು. ಗುಂಪಿನ ಅಂಚಿನಲ್ಲಿ ಕುಳಿತಿದ್ದವರು ಸದ್ದಿಲ್ಲದೆ ಜಾರಿಕೊಂಡರು. ಕ್ರಮೇಣ, ಮಧ್ಯರಾತ್ರಿ ಯಾದಂತೆ, ಮಿಕ್ಕವರೂ ಅವರ ಹಾದಿಯನ್ನೇ ಹಿಡಿದರು. ನಂಬಿಯು

ನೆಲದಕಡೆಯೇ ನೋಡುತ್ತಿದ್ದ. ಚಿಂತೆಯಿಂದ ಕೊರಳು ಬಗ್ಗಿತ್ತು. ಆ ದಿನ ಅದೇ ಮೊದಲು ತನಗೆ ಮುಪ್ಪು ಬಂತೆಂದು ಅವನಿಗೆ ಅರಿವಾಯಿತು. ತನ್ನ ವಿಚಾರಶಕ್ತಿಯನ್ನು ಹತೋಟಿಯಲ್ಲಿಟ್ಟುಕೊಳ್ಳುವ ಶಕ್ತಿಯನ್ನೂ, ಮನಸ್ಸಿನಲ್ಲಿದ್ದುದನ್ನು ಅಚ್ಚುಕಟ್ಟಾಗಿ ತಿಳಿಸುವ ಸಾಮರ್ಥ್ಯವನ್ನೂ ಮತ್ತೆ ಎಂದೆಂದಿಗೂ ಪಡೆಯಲು ಸಾಧ್ಯವಾಗುವುದಿಲ್ಲವೆಂದು ಅವನಿಗೆ ಮಂದಟ್ಟಾಯಿತು. ಕತ್ತೆತ್ತಿದ. ಕಮ್ಮಾರ ಮರಿಯಣ್ಣನೊಬ್ಬನ ಹೊರತು ಮಿಕ್ಕವರೆಲ್ಲ ಹೊರಟುಹೋಗಿದ್ದರು. "ಮರಿ, ನೀನೂ ಏಕೆ ಹೊರಟುಹೋಗಲಿಲ್ಲ?"

ಮಿಕ್ಕವರಿಗಾಗಿ ಮರಿ ಕ್ಷಮೆ ಬೇಡಿದ. "ನಿನಗೆ ತೊಂದರೆ ಕೊಡಬಾರದೆಂಬುದಾಗಿ ಅವರು ಹೊರಟುಹೋದರು ಅಷ್ಟೆ."

ನಂಬಿ ಎದ್ದು ನಿಂತ. "ನೀ ಹೇಳಿದುದು ದಿಟ. ನಾಳೆ ಸರಿ ಹೋಗುತ್ತದೆ. ವಯಸ್ಸು, ವಯಸ್ಸು. ನನ್ನ ವಯಸ್ಸೆಷ್ಟು? ಇದ್ದಕ್ಕಿದ್ದಂತೆ ಕವಿದುಕೊಂಡಿತು ಮುಪ್ಪು." ನಂಬಿ ತನ್ನ ತಲೆಯ ಕಡೆ ತೋರಿಸಿ, "ಇದು ಹೇಳುತ್ತದೆ 'ದಡ್ಡಾ, ಇನ್ನು ಮುಂದೆ ನಾನು ನಿನ್ನ ದಾಸನಾಗಿ ಇರುತ್ತೇನೆಂದು ತಿಳಿಯಬೇಡ. ನೀನು ನನ್ನ ದಾಸನಾಗುತ್ತೀಯೆ ಇನ್ನು ಮೇಲೆ,' ಎಂದು. ಶುದ್ಧ ದ್ರೋಹಿ ಈ ತಲೆ. ವಿಧೇಯತೆಯನ್ನು ಬಿಟ್ಟು ಬಿಟ್ಟಿದೆ." ಎಂದನು.

ಮತ್ತೆ ಮೂರನೆಯ ದಿನ ಹಣತೆ ಹೊತ್ತಿಸಿಟ್ಟನು. ಎಂದಿನಂತೆ ಜನ ಬಂದು ಸೇರಿದರು ಆಲದ ಮರದ ಅಡಿಯಲ್ಲಿ. ನಂಬಿ ದಿನವನ್ನೆಲ್ಲ ಧ್ಯಾನದಲ್ಲೇ ಕಳೆದಿದ್ದನು. ತನ್ನನ್ನು ತ್ಯಜಿಸಕೂಡದೆಂದು ದೇವಿಯನ್ನು ವಿಶೇಷ ಭಕ್ತಿಯಿಂದ ಬೇಡಿಕೊಂಡಿದ್ದನು. ಕತೆಯನ್ನು ಆರಂಭಿಸಿ, ಒಂದು ಗಂಟೆಯ ಕಾಲ ಯಾವ ವಿಘ್ನವೂ ಇಲ್ಲದೆ ಕತೆ ಹೇಳಿದ. ದೊಡ್ಡದೊಂದು ಹೊರೆಯನ್ನಿಳಿಸಿದಂತಾಯಿತು ಆತನಿಗೆ. ಕತೆಯನ್ನು ಕೊಂಚ ಹೊತ್ತು ನಿಲ್ಲಿಸಿ "ಗೆಳೆಯರೆ, ತಾಯಿಗೆ ಯಾವಾಗಲೂ ಬಹಳ ಕರುಣೆ. ನನಗೆ ನಿನ್ನೆಯಿಂದ ಹುಚ್ಚುಭಯ ಬಂದುಬಿಟಿತ್ತು . . . . . ." ಎಂದು ಹೇಳಿ ಕತೆಯನ್ನು ಮುಂದುವರಿಸಿದನು. ಇದಾದ ಕೆಲವು ನಿಮಿಷಗಳಲ್ಲಿ ಇದ್ದಕ್ಕಿದ್ದಂತೆ ಅವನ ಮನಸ್ಸು ಬರಿದಾಗಿ ಹೋಯಿತು. ಎಷ್ಟೆಷ್ಟೋ ಶ್ರಮ

ಪಟ್ಟನು. "ಆಮೇಲೆ . . . . ಆಮೇಲೆ . . . . ಆಮೇಲೇನಾಯಿತು ?" . . . ಒದ್ದಾಡಿದನು. ಆಮೇಲೆ ಅರ್ಧ ಗಂಟೆಯ ಕಾಲ ಮೌನ ಧರಿಸಿದನು. ಸೇರಿದ್ದ ಜನ ತುಟಿಪಿಟಿಕ್ಕೆನ್ನದೆ ಎದ್ದು ಮನೆಗೆ ಹೊರಟು ಹೋದರು. ಹಗಲು ಜಾವ ಕೋಳಿ ಕೂಗುವವರೆಗೆ ಮುದುಕ ಕಲ್ಲಿನ ಮೇಲೆ ಚಿಂತಾಮಗ್ನನಾಗಿ ಕುಳಿತಿದ್ದನು. "ಅವರನ್ನು ಆಕ್ಷೇಪಿಸುವುದು ಸರಿಯಲ್ಲ. ರಾತ್ರಿಯಲ್ಲಿ ಕುಳಿತು ಕಣ್ಣು ಜ್ಜಿಕೊಳ್ಳುತ್ತಿರಬಲ್ಲರೆ ಅವರು ?" ಎಂದು ತನ್ನಷ್ಟಕ್ಕೆ ತಾನೇ ಮಲಗಿಕೊಂಡನು. ಎರಡು ದಿನದ ಮೇಲೆ ಕತೆಯ ಮತ್ತೊಂದು ಕಂತನ್ನು ಸಲ್ಲಿಸಿದ. ಆದರೆ ಆ ದಿನವೂ ಕೆಲವು ನಿಮಿಷಗಳಲ್ಲಿ ಅವನ ಬಾಯಿ ಕಟ್ಟಿ ಹೋಯಿತು. ಕ್ರಮೇಣ ಸೇರುತ್ತಿದ್ದವರ ಸಂಖ್ಯೆ ಇಳಿದು ಹೋಯಿತು. ಹಣತೆಯ ಕಡೆ ಜನರ ದೃಷ್ಟಿ ಮೊದಲಿಗಿಂತ ಕಡಿಮೆಯಾಗಿ ಹೊರಳುತ್ತಿತ್ತು. ಬರುವವರೂ ದಾಕ್ಷಿಣ್ಯಕ್ಕಾಗಿ ಬರುತ್ತಿದ್ದರು. ಈ ಹೋರಾಟವನ್ನು ಮುಂದುವರಿಸಿ ಫಲವಿಲ್ಲವೆಂಬುದನ್ನು ನಂಬಿ ಕಂಡುಕೊಂಡನು. ಕತೆಯನ್ನು ಅತಿ ಜಾಗ್ರತೆಯಾಗಿ ಅರ್ಧಮರ್ಧದಲ್ಲಿಯೇ ಕೊನೆಗಾಣಿಸಿದನು.

ಏನಾಗುತ್ತಿತ್ತೆಂಬುದರ ಅರಿವು ಅವನಿಗುಂಟಾಯಿತು. ತನ್ನ ಅಪಜಯದ ಕೊರಗಿನಿಂದ ಮನಸ್ಸಿಗೆ ಬಹಳ ಕಿಂಕೃತಿಯೂ ಆಯಿತು. "ಹಿಂದೆಯೇ ನನಗೆ ಸಾವೊದಗಿದ್ದರೆ ಬಹಳ ಚೆನ್ನಾಗಿ ಇರುತ್ತಿತ್ತು. ಇನ್ನೂ ಸಂತೋಷವಾಗಿರಬಹುದಾಗಿತ್ತು." ಎಂದು ತನಗೆ ತಾನೇ ಹೇಳಿಕೊಂಡನು. "ತಾಯೆ . . . ನನ್ನ ನಾಲಗೆಯನ್ನೇಕೆ ಕಸಿದುಕೊಂಡೆ ? . . ." ಎಂದು ಮೊರೆಯಿಟ್ಟನು. ಗರ್ಭಗುಡಿಯೊಳಗೆ ಸೇರಿಕೊಂಡು ಅಚಲವಾಗಿ ಕುಳಿತು ತದೇಕಧ್ಯಾನದಲ್ಲಿ ದಿನದ ಬಹುಭಾಗವನ್ನು ಕಳೆಯತೊಡಗಿದನು. ಅನ್ನ ನೀರು ಬೇಕಿರಲಿಲ್ಲ.

ಮಾರನೆಯ ದಿನ ಚಂದ್ರಬೆಟ್ಟದ ಮೇಲೆ ಕಾಣಿಸಿಕೊಂಡಾಗ ನಂಬಿ ಮತ್ತೆ ಹಣತೆಯನ್ನು ಹಚ್ಚಿದನು. ಹಳ್ಳಿಗರು ಕೆಲಸದಿಂದ ಹಿಂದಿರುಗುವಾಗ ದೀಪವನ್ನು ನೋಡಿದರು. ಆದರೆ ಬೆರಳು ಮಡಿಸಿ ಎಣಿಸುವಷ್ಟೇ ಜನ ಬಂದಿದ್ದರು ಆ ರಾತ್ರಿ. "ಮಿಕ್ಕವರೆಲ್ಲಿ ? ಕಾದು ನೋಡೋಣ

ಎಂದನು ಮುದುಕ. ಕಾಯ್ದು ನೋಡಿಯಾಯಿತು. ಚಂದ್ರ ಮೇಲಕ್ಕೆ ಬಂದನು. ಸೇರಿದ್ದವರು ಬಹಳ ಸಹನೆಯಿಂದ ತಡೆದುಕೊಂಡಿದ್ದರು. ಆ ಮೇಲೆ ಮುದುಕ ಹೇಳಿದನು. "ಇಂದು ನಾನು ಕತೆ ಹೇಳುವುದಿಲ್ಲ. ನಾಳೆಯೂ ಹೇಳುವುದಿಲ್ಲಿ, ಹಳ್ಳಿಯುವರೆಲ್ಲ ಬಾರದಿದ್ದರೆ. ಎಲ್ಲರೂ ಬಂದೇ ತೀರಬೇಕು. ಅತಿ ಪ್ರಚಂಡವಾದ ಕತೆ ಅದು. ಪ್ರತಿಯೊಬ್ಬರೂ ಕೇಳಲೇ ಬೇಕು." ಮೂರನೆಯ ದಿನ, ಹಳ್ಳಿಯ ದೊಡ್ಡ ಬೀದಿಯಲ್ಲಿ, "ಅತ್ಯದ್ಭುತ ವಾದ ಕತೆಯನ್ನು ಈ ರಾತ್ರಿ ಹೇಳುವವನಾಗಿದ್ದೇನೆ. ಎಲ್ಲರೂ ಬನ್ನಿ, ತಪ್ಪಬೇಡಿ . . . ." ಎಂಬುದಾಗಿ ಕೂಗಿಕೊಂಡು ಹೊರಟ. ಈ ಸ್ವಂತ ಪ್ರಾರ್ಥನೆ ವಿಶೇಷ ಪರಿಣಾಮಕಾರಿಯಾಗಿತ್ತು. ರಾತ್ರಿ ಆಲದಮರದ ಕೆಳಗೆ ಭಾರಿಯ ಗುಂಪು ಸೇರಿತು. ಕತೆಗಾರ ತನ್ನ ಶಕ್ತಿಯನ್ನು ಮತ್ತೆ ಪಡೆದು ಕೊಂಡನೆಂದು ಅವರೆಲ್ಲರಿಗೂ ಆನಂದವಾಗಿತ್ತು. ಎಲ್ಲರೂ ಕುಳಿತುಕೊಂಡ ಮೇಲೆ ನಂಬಿಯು ಗುಡಿಯಿಂದ ಹೊರಗೆ ಬಂದು ಎಲ್ಲರಿಗೂ ಕೇಳುವಂತೆ ಹೇಳಿದನು: "ವರಗಳನ್ನು ಕೊಡುವವಳು ತಾಯಿ. ಅವನ್ನು ಹಿಂದಕ್ಕೆ ಪಡೆದುಕೊಳ್ಳುವವಳೂ ತಾಯಿ. ನಂಬಿಯು ಬರಿಯ ಬೆಪ್ಪ. ತಾಯಿಗೇ ನಾದರೂ ಹೇಳಬೇಕೆನ್ನಿಸಿದರೆ ನಂಬಿಯು ಮಾತನಾಡುವನು. ಅವಳು ಏನನ್ನೂ ಹೇಳಬಯಸದಿದ್ದರೆ ಅವನಿಗೆ ಮೂಕತನ ಬಡಿದುಕೊಳ್ಳುವುದು. ಸುಗಂಧ ಹೋದಮೇಲೆ ಜಾಜಿಯ ಹೂವಿದ್ದೇನು ಫಲ? ಎಣ್ಣೆಯೆಲ್ಲ ಸುರಿದುಹೋದಮೇಲೆ ಹಣತೆಯಿದ್ದೇನು ಫಲ? ದೇವಿಯ ಮಹಿಮೆ ಅಪಾರವಾದುದು . . . . ಈ ಭೂಮಿಯಲ್ಲಿ ನಾನು ಆಡುವ ಕಡೆಯ ಮಾತುಗಳಿವು. ಇದೇ ನನ್ನ ಅತ್ಯದ್ಭುತವಾದ ಕತೆ." . . . . ಎದ್ದು ಗುಡಿ ಯೊಳಕ್ಕೆ ಹೊರಟುಹೋದನು ನಂಬಿ. ಅವನು ಹೇಳಿದುದರ ಅರ್ಥ ಜನ ರಿಗೆ ತಿಳಿಯಲಿಲ್ಲ. ಅವರಿಗೆ ಬೇಸರವಾಗುವವರೆಗೂ ಅಲ್ಲಿಯೇ ಕುಳಿತಿದ್ದರು. ಆಮೇಲೆ ಕೆಲವರೆದ್ದು ಗರ್ಭಗುಡಿಯೊಳಗೆ ಇಣಿಕಿ ನೋಡಿದರು. ಕತೆ ಗಾರನು ಕಣ್ಣು ಮುಚ್ಚಿಕೊಂಡು ಕುಳಿತಿದ್ದನು. "ಕತೆ ಹೇಳುವುದಿಲ್ಲವೆ?" ಎಂದು ಕೇಳಿದರು. ಆತ ಕಣ್ಣು ತೆರೆದು ಸುತ್ತಲೂ ನೋಡಿ ತಲೆಯಲ್ಲಾಡಿ ಸಿದನು. ತನ್ನ ಕಡೆಯ ಮಾತುಗಳನ್ನಾಡಿ ಆಗಿಹೋಯಿತೆಂದು ಸಂಜ್ಞೆಗಳ ಮೂಲಕ ತೋರಿಸಿದನು.

ಹಸಿವು ತೋರಿದರೆ ಯಾವುದಾದರೂ ಮನೆಯೊಳಗೆ ಪ್ರವೇಶಿಸಿ ಮೌನದಲ್ಲಿ ಊಟಮಾಡುವನು. ತಿಂದ ತಕ್ಷಣ ಹೊರಟುಬಿಡುವನು. ಇದಿಷ್ಟನ್ನು ಬಿಟ್ಟು ನಂಬಿಯು ಮಾನವಕುಲದಿಂದ ಬೇರೇನನ್ನೂ ನಿರೀಕ್ಷಿಸ ಲಿಲ್ಲ. ಆತನ ಜೀವಮಾನದ ಮಿಕ್ಕಭಾಗವೆಲ್ಲ ಒಂದು ದೀರ್ಘವಾದ ನೀರವತೆಯಾಗಿತ್ತು.

---

ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.

# DODU AND OTHER STORIES

## OPINIONS

" . . . . One takes up this book with expectation . . . . they deal with varying themes . . . . Some deal with children, some with unusual characters, others with the weird, and some glance at peculiarities in our social setting, but there is a refreshing variety in the subject matter and a sense of artistic adequacy throughout. . . . "

Masti Venkatesa Iyengar in TRIVENI.

" Mr. Narayan is a keen and critical observer of life. We leave the book with an impression of having both seen through life and heard its deeper accents."

V. M. Inamdar in ARYAN PATH.

" It is a perfect bedside book . . . .

TWENTIETH CENTURY.

" The blend of tragedy, humour, and irony, reaches almost uncanny perfection in the stories."

THE MAIL